Jul 94

# ಮಾನಸಿ

ತಿಂಗಳ ಪತ್ರಿಕೆ ಜುಲೈ 1994

★ ಪಿತೃ ಪ್ರಧಾನತೆ

★ ಮಹಿಳೆ ಮತ್ತು ವರದಕ್ಷಿಣೆ

★ ಸದ್ದಿಲ್ಲದ ಸಮರ

★ ವಿದ್ಯಾವಂತ ಮಹಿಳೆಯರತ್ತ ಸಾಗಿದ್ದಾರೆ

★ ನಿಗೂಢವಾಗುವ ಸಾವುಗಳು

★ ನಾರ್‌ಪ್ಲಾಂಟ್ ಕುರಿತು

# ಮಾನಸ

ತಿಂಗಳ ಪತ್ರಿಕೆ

ಸಂಪುಟ : 9 ಸಂಚಿಕೆ : 6

ಜುಲೈ - 1994





ವಿಳಾಸ :

**"ಮಾನಸ"** ತಿಂಗಳ ಪತ್ರಿಕೆ
ಪಂಚಾಯಿತಿ ರಸ್ತೆ
ಕಾಡುಗೋಡಿ ಪೋಸ್ಟ್
ಬೆಂಗಳೂರು - 560 067

**ಸಂಪರ್ಕ ವಿಳಾಸ**

ಸಂ. 457, 12ನೇ ಅಡ್ಡರಸ್ತೆ,
ಪಶ್ಚಿಮ ಕಾರ್ಡ್‌ರಸ್ತೆ, 2ನೇ ಹಂತ
ಮಹಾಲಕ್ಷ್ಮಿಪುರ, ಬೆಂಗಳೂರು–560 086

ಸೂಚನೆ : ಬಿಡಿ ಪ್ರತಿ : **3-00 ರೂ.**
ವಾರ್ಷಿಕ ಚಂದಾ : **25 ರೂ.**
ಆಜೀವ ಚಂದಾ : **300 ರೂ.**

ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು


**ಈ ಸಂಚಿಕೆಯಲ್ಲಿ...**




ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ
ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು - ೫೬೦ ೦೬೭



# ಸಂಪಾದಕೀಯ

ಕುಟುಂಬ ಯೋಜನೆಯನ್ನು ರಾಷ್ಟ್ರೀಯ ಕಾರ್ಯಕ್ರಮದಲ್ಲಿ ಅಳವಡಿಸಿಕೊಂಡ ಮೊದಲ ದೇಶ ನಮ್ಮದು. ಇದರರ್ಥ, ಅದು ಪ್ರತಿ ಪಂಚವಾರ್ಷಿಕ ಯೋಜನೆಗಳಲ್ಲಿಯೂ ಒಳಗೊಂಡಿರುತ್ತದೆ ಮತ್ತು ಕಾಲಾನುಕಾಲಕ್ಕೆ ಸ್ವರೂಪವನ್ನು ಬದಲಾಯಿಸಿಕೊಳ್ಳುತ್ತಿರುತ್ತದೆ. ಜನಸಂಖ್ಯಾ ನಿಯಂತ್ರಣವನ್ನೇ ಮುಖ್ಯ ಉದ್ದೇಶವನ್ನಾಗಿ ಹೊಂದಿರುವ ಈ ಕಾರ್ಯಕ್ರಮಗಳಿಗೆ ಮಹಿಳೆಯರೇ ಯಾವಾಗಲೂ ಟಾರ್ಗೆಟ್. ಆದರೆ ICMR ಪ್ರಕಾರ "ಗರ್ಭ ನಿರೋಧಕಗಳು ಮಹಿಳೆಯರ ಒಳಿತಿಗಾಗಿ ಇರುವಂತಹವೇ ಹೊರತು ಕೇವಲ ಜನಸಂಖ್ಯಾ ನಿಯಂತ್ರಣಕ್ಕಲ್ಲ. ಮಹಿಳೆಯರ ಜೀವನದ ಗುಣಮಟ್ಟ ಸುಧಾರಿಸುವಲ್ಲಿಯೇ ಇಲ್ಲಿನ ಆದ್ಯತೆ." ಆದರೆ ಗರ್ಭ ನಿರೋಧಕಗಳ ಚರಿತ್ರೆ ನೋಡುವಾಗ ಇದು ನೂರಕ್ಕೆ ನೂರು ಪಾಲು ಸುಳ್ಳು ಎಂಬುದು ಸತ್ಯವಾಗಿ ರಾಚುತ್ತದೆ. ಏಕೆಂದರೆ ಪ್ರಾರಂಭದಲ್ಲಿ ಅಳವಡಿಸಿಕೊಂಡ ವಿಧಾನಗಳು ಮುಖ್ಯವಾಗಿ ಸಂತಾನಹರಣ ಶಸ್ತ್ರ ಚಿಕಿತ್ಸೆಯಂತಹವಾಗಿದ್ದು, ಮಹಿಳೆಯರು ಎರಡೋ – ಮೂರೋ ಮಕ್ಕನ್ನು ಒಮ್ಮೆಗೇ ಪಡೆದು ನಂತರ ಒಂದೇ ಬಾರಿಗೆ ಇಂತಹ ಕ್ರಮಗಳಿಗೆ ಮೊರೆ ಹೋಗುತ್ತಿದ್ದರು. ಇದರಿಂದ ತತ್‌ಕ್ಷಣದ ಜನಸಂಖ್ಯಾ ನಿಯಂತ್ರಣವಾಗದೇ ಹೋದ್ದರಿಂದ ನಂತರದ ಹಂತಗಳಲ್ಲಿ ಮಕ್ಕಳ ನಡುವೆ ಅಂತರ ತರುವಂತಹ ವಿಧಾನಗಳಿಗೆ ಹೋಗಲಾಯಿತು. ಈ ನಿಟ್ಟಿನಲ್ಲಿ ಬಂದ ವಂಕಿ ಮಾತ್ರೆಗಳು, ಇಂಜಕ್ಷನ್‌ಗಳೆಲ್ಲಾ ನಿಯಂತ್ರಕರ (ಸರ್ಕಾರ) ಸಂಪೂರ್ಣ ಹಿಡಿತಕ್ಕೆ ಸಿಕ್ಕದೇ ಹೋದಾಗ, ಒಮ್ಮೆ ಅಳವಡಿಸಿಬಿಟ್ಟರೆ ಐದು ವರ್ಷದವರೆಗೆ ಏನೂ ಮಾಡಲು ಸಾಧ್ಯವಾಗ ಕೂಡದು ಅಂತಹ ನಾರ್‌ಪ್ಲಾಂಟ್ ಮುಂತಾದ ಗರ್ಭ ನಿರೋಧಕಗಳನ್ನು ತರಲಾಯಿತು. ಇವೆಲ್ಲಾ ಮಹಿಳೆಯರ ಒಳಿತಿಗಾಗಿ ಇರುವಂತಹವಾಗಿದ್ದರೆ ಅವುಗಳ ಬಗ್ಗೆ ಮಹಿಳೆಯರಿಗೇಕೆ ಮಾಹಿತಿ ನೀಡುತ್ತಿಲ್ಲ? "ನೂರಕ್ಕೆ ನೂರು ಭಾಗ ಸುರಕ್ಷಿತ" ಎನ್ನುವ ಅಪ್ಪಟ ಸುಳ್ಳು ಮಾಹಿತಿ ಕೊಟ್ಟು ಪ್ರಯೋಗಗಳಿಗೆ ಅವರನ್ನು ಬಲಿಪಶುವಾಗಿಸಿ ಮುಂದೆ ಅವರು ಯಾವುದೇ ತೊಂದರೆಗೊಳಗಾದರೂ ಅದು ಅವರ ಕಲ್ಪನೆ ಎಂದು ತಳ್ಳಿಹಾಕಿಬಿಡುವಂತಹ ಹುನ್ನಾರ ಏಕೆ ?

"ಮಹಿಳೆಯರ ಒಳಿತಿಗಾಗಿಯೇ ಇರುವಂತಹವು" ಮಹಿಳೆಯರ ಆಯ್ಕೆಗೆ ದಕ್ಕುವಂತಿರಬೇಕು ಎನ್ನುವ ನಿಟ್ಟಿನಲ್ಲಿ ಮಹಿಳಾ ಚಳವಳಿ ಪ್ರಾರಂಭದಿಂದಲೂ ಹೋರಾಟ ನಡೆಸುತ್ತಲೇ ಬಂದಿದೆ. 1986ರಲ್ಲೇ ಅಪಾಯಕರ ಗರ್ಭನಿರೋಧಕಗಳನ್ನು ವಿರೋಧಿಸಿ **ಸಹೇಲಿ** ಮತ್ತಿತರ ಮಹಿಳಾ ಸಂಘಟನೆಗಳು ಕೋರ್ಟಿನಲ್ಲಿ ದಾವೆ ಹೂಡಿದ್ದವು. ಇಂತಹ ಪ್ರತಿಭಟನೆಗಳನ್ನು ಕೊಚ್ಚಿಕೊಂಡು ಮುನ್ನುಗ್ಗುತ್ತಿರುವ ಮಹಿಳೆಯರಿಗೆ ಮಾರಕಕಾರೀಯಾಗಿರುವ ಗರ್ಭ ನಿರೋಧಕಗಳ ವಿರುದ್ಧ ಇನ್ನೂ ವ್ಯವಸ್ಥಿತ ಹೋರಾಟ ನಡೆಯಬೇಕಿದೆ.

# ಪಿತೃ ಪ್ರಧಾನತೆ

(ಹಿಂದಿನ ಸಂಚಿಕೆಯಿಂದ)

### ರ್‍ಯಾಡಿಕಲ್ ಹಾಗೂ ಕ್ರಾಂತಿಕಾರಿ ಸ್ತ್ರೀವಾದಿ ವಿವರಗಳು

ರ್‍ಯಾಡಿಕಲ್ ಸ್ತ್ರೀವಾದಿಗಳ ಪ್ರಕಾರ ಪಿತೃಪ್ರಧಾನ ವ್ಯವಸ್ಥೆ ಖಾಸಗೀ ಆಸ್ತಿಯ ಪರಿಕಲ್ಪನೆಗಿಂತ ಮೊದಲೇ ಅಸ್ತಿತ್ವದಲ್ಲಿತ್ತು. ಆರಂಭದಿಂದಲೂ ಮೂಲಭೂತ ವಾದ ವೈರುಧ್ಯಗಳು ಮೊದಲು ಗಂಡು ಹೆಣ್ಣಿನ ನಡುವೆ ಇದ್ದಿತೆ ವಿನಾಃ ವರ್ಗವೈರುದ್ಯವಲ್ಲ. ಸ್ತ್ರೀಯರೆಲ್ಲಾ ಒಂದೇ ವರ್ಗವೆಂದು ರ್‍ಯಾಡಿಕಲ್ ಸ್ತ್ರೀ ವಾದಿಗಳು ಭಾವಿಸುತ್ತಾರೆ. ಪಿತೃಪ್ರಧಾನ ವ್ಯವಸ್ಥೆ ಸಹಜವಾದುದೆಂದು ಹಾಗೂ ಸದಾ ಆಸ್ತಿತ್ವದಲ್ಲಿತ್ತು, ಮುಂದೆಯೂ ಇರುತ್ತದೆ ಯೆಂಬ ಸಂಪ್ರದಾಯವಾದಿಗಳ ನಂಬಿಕೆ ಇವರಲ್ಲಿಲ್ಲ.

ಶಾರೀರಿಕ ಅಥವಾ ಮಾನಸಿಕ ವ್ಯತ್ಯಾಸದ ಹಿನ್ನಲೆಯಲ್ಲಿ ಗಂಡು–ಹೆಣ್ಣಿನ ನಡುವಿರುವ ತಾರತಮ್ಯವನ್ನು ಇವರು ವ್ಯಾಖ್ಯಾನಿಸುತ್ತಾರೆ. ಶೂಲಾಮಿತ್ ಪೈಯರ್ ಸ್ಟೋನ್ ಸಂತಾನೋತ್ಪತ್ತಿ ಕ್ರಿಯೆಯಿಂದ ಸ್ತ್ರೀಯರು ಶೋಷಣೆಗೆ ಒಳಗಾಗಿದ್ದಾರೆಂದು ಹೇಳುತ್ತಾಳೆ. ಸ್ತ್ರೀಯರ ಸಂತಾನೋತ್ಪತ್ತಿ ಸಾಮರ್ಥ್ಯ ಪುರುಷರ ನಿಯಂತ್ರಣ ದಲ್ಲಿರುವುದರಿಂದ ಸಂತಾನೋತ್ಪತ್ತಿ ಕ್ರಿಯೆಯೇ ಸ್ತ್ರೀಯರ ಶೋಷಣೆಗೆ ತಳಹದಿಯಾಗಿದೆ.

ಕೆಲವು ರ್‍ಯಾಡಿಕಲ್ ಸ್ತ್ರೀವಾದಿಗಳ ಪ್ರಕಾರ ಎರಡು ಸಾಮಾಜಿಕ ವರ್ಗ ವ್ಯವಸ್ಥೆಯಿದೆ.

1) ಉತ್ಪಾದನಾ ಸಂಬಂಧವನ್ನು ಆಧರಿಸಿದ ಆರ್ಥಿಕ ವರ್ಗ ವ್ಯವಸ್ಥೆ 2) ಸಂತಾನೋತ್ಪತ್ತಿ ಸಂಬಂಧವನ್ನು ಆಧರಿಸಿದ ಲೈಂಗಿಕ ವರ್ಗ ವ್ಯವಸ್ಥೆ. ಈ ಎರಡನೆಯ ಪದ್ಧತಿಯೇ ಸ್ತ್ರೀಯರ ಶೋಷಣೆಗೆ ಕಾರಣವಾಗಿದೆ. ಪಿತೃ ಪ್ರಧಾನತೆಯ ಪರಿಕಲ್ಪನೆ, ಪುರುಷರಿಂದ ಸ್ತ್ರೀಯರಿ ಗಾಗಿ ರಚಿತವಾದ ಕಾನೂನು, ಸ್ತ್ರೀಯರ ಸಂತಾನೋತ್ಪತ್ತಿ ಕ್ರಿಯೆಯ ಮೇಲೆ ಪುರುಷರ ಯಜಮಾನಿಕೆ ಹಾಗೂ ನಿಯಂತ್ರಣಕ್ಕೆ ಸಂಬಂಧ ಪಟ್ಟಿದೆಯೆಂದು ಇವರು ಭಾವಿಸುತ್ತಾರೆ. ಈ ಕಾರಣದಿಂದಲೇ ಸ್ತ್ರೀಯರು ದೈಹಿಕ ವಾಗಿ ಹಾಗೂ ಮಾನಸಿಕವಾಗಿ ಪುರುಷರನ್ನು ಅವ ಲಂಭಿಸುವಂತಾಗಿದೆ. ಆರ್ಥಿಕ ವರ್ಗ ವ್ಯವಸ್ಥೆಯ ಬೆಳವಣಿಗೆ, ಸಾಂಸ್ಕೃತಿಕ ಹಾಗೂ ಐತಿಹಾಸಿಕ ಬದಲಾವಣೆ ಯೊಂದಿಗೆ ಈ ನಿಯಂತ್ರಣದ ನಿರ್ಧಿಷ್ಟ ವಿಧಾನಗಳು ಬದಲಾವಣೆಯಾಗುತ್ತವೆ. ಪುರುಷರು ಸ್ತ್ರೀಯರ ಸಂತಾನೋತ್ಪತ್ತಿ ಸಾಮರ್ಥ್ಯದ ಮೇಲೆ ಹೊಂದಿರುವ ನಿಯಂತ್ರಣ ಹಾಗೂ ಅಧಿಕಾರವೇ ಪಿತೃಪ್ರಧಾನ ವ್ಯವಸ್ಥೆಯು ಸ್ಥಿರವಾಗಿ ನೆಲೆಯೂರಲು ಭದ್ರವಾದ ಬುನಾದಿಯನ್ನು ಹಾಕುತ್ತವೆಯೆಂದು ಕ್ರಾಂತಿಕಾರಿ ಸ್ತ್ರೀವಾದಿಗಳು ವಾದಿಸುತ್ತಾರೆ.

ಸ್ತ್ರೀಯರ ಶಾರೀರಿಕ ರಚನೆಯೇ ಸ್ತ್ರೀಯರ ಶೋಷಣೆಗೆ ಕಾರಣವಲ್ಲ. ಆದರೆ ಪುರುಷರು ಈ ಶಾರೀರಿಕ ಮೌಲ್ಯಗಳಿಗೆ ನೀಡುತ್ತಿರುವ ಮೌಲ್ಯ ಹಾಗೂ ನಿಯಂತ್ರಣದಿಂದ ಪಡೆಯುವ ಅಧಿಕಾರವೇ ಶೋಷಣೆಗೆ ಕಾರಣವಾಗಿದೆ.

ಪಿತೃಪ್ರಧಾನ ವ್ಯವಸ್ಥೆ ಸ್ತ್ರೀಯರ ಶಾರೀರಕ ರಚನೆಗೆ ಸಂಬಂಧ ಪಡದೇ, ಪುರುಷರ ಶಾರೀರಿಕ ರಚನೆಗೆ ತಳುಕು ಹಾಕಿಕೊಂಡಿದೆಯೆಂದು ಕೆಲವು ರ್‍ಯಾಡಿಕಲ್ ಸ್ತ್ರೀವಾದಿಗಳು ಭಾವಿಸುತ್ತಾರೆ. ಪುರುಷರು ಸ್ತ್ರೀಯರ ಮೇಲೆ ಅತ್ಯಾಚಾರ ಮಾಡುವ ಸಾಮರ್ಥ್ಯದಿಂದಾಗಿ ಸ್ತ್ರೀಯರು ಶೋಷಣೆಗೆ ಒಳಗಾಗಿದ್ದಾರೆಂದು ಸೂಜನ್ ಬ್ರೌನ್‌ಮಿಲ್ಲರ್ ಹೇಳುತ್ತಾಳೆ. ಕ್ಷಣದಲ್ಲಿ ಸ್ತ್ರೀಯರ ಮೇಲೆ ನಿಯಂತ್ರಣವನ್ನು ಹೊಂದಲು ಪುರುಷರು ತಮ್ಮ ಅತ್ಯಾಚಾರ ಮಾಡುವ ಸಾಮರ್ಥ್ಯವನ್ನು ಉಪ ಯೋಗಿಸುತ್ತಾರೆ. ಇದು ಪುರುಷರು ಸ್ತ್ರೀಯರ ಮೇಲೆ ಪ್ರಭುತ್ವ ಹಾಗೂ ಒಡೆತನವನ್ನು ಸಾಧಿಸಲು ಅವಕಾಶ ನೀಡುತ್ತದೆ. ಪ್ರಾಣಿಗಳನ್ನು ಪಳಗಿಸಿ, ಸಾಕುವುದ ರಿಂದಾಗಿ ಸಂತಾನೋತ್ಪತ್ತಿ ಕ್ರಿಯೆಯಲ್ಲಿ ಪುರುಷನು ತನ್ನ ಪಾತ್ರವನ್ನು ಅರಿಯುವಂತೆ ಮಾಡಿತು. ಪ್ರಾಣಿಗಳ ಬಲಾತ್ಕಾರದ ಸಮಾಗಮ ಪುರುಷರಿಗೆ ಲೈಂಗಿಕ ಅತ್ಯಾಚಾರದ ಆಲೋಚನೆಯನ್ನು ನೀಡಿತು ಎಂದು ಎಲಿಜಬೆತ್ ಫಿಶರ್ ತೀವ್ರವಾಗಿ ವಾದಿಸುತ್ತಾಳೆ. ಪ್ರಾಣಿ ಗಳನ್ನು ಪಳಗಿಸುವಾಗ ಬಳಸುವ ಹಿಂಸೆ ಮತ್ತು ಕ್ರೌರ್ಯ ಪುರುಷರ ಲೈಂಗಿಕ ಪ್ರಭುತ್ವಕ್ಕೆ ಇಂಬು ನೀಡಿತಲ್ಲದೆ, ಹಿಂಸೆಯನ್ನು ಸಾಂಸ್ಥೀಕರಿಸಿತು.

ಪಿತೃಪ್ರಧಾನತೆ ಪುರುಷರ ಮನಸ್ಸಿಗೆ ಸಂಬಂಧಪಟ್ಟಿದೆ ಯೆಂದು ಕೆಲವು ಸ್ತ್ರೀವಾದಿಗಳು ಭಾವಿಸುತ್ತಾರೆ. ಮಕ್ಕಳನ್ನು ಪಡೆಯುವ ಸಾಮರ್ಥ್ಯ ಪುರುಷರಲ್ಲಿ ಇಲ್ಲದ ಕಾರಣ, ಆ ಕೊರತೆಯನ್ನು ತುಂಬಿಕೊಳ್ಳುವ ಅಗತ್ಯ ಪುರುಷರ ಪ್ರಭುತ್ವವನ್ನು ಸಾಂಸ್ಥೀಕರಿಸುವಂತೆ ಮಾಡಿತು ಎಂದು ಓಬ್ರಿಯನ್ ಭಾವಿಸುತ್ತಾಳೆ. ಸ್ತ್ರೀಯರ ಶಾರೀರಿಕ ರಚನೆ ಅಥವಾ ಮಾನಸಿಕತೆಯ ಕಾರಣದಿಂದ ಪುರುಷರು ಮತ್ತು ಸ್ತ್ರೀಯರು ಎರಡು ಭಿನ್ನ ವರ್ಗಗಳಿಗೆ ಸೇರುತ್ತಾರೆ. ಪುರುಷರು ಆಳುವ ವರ್ಗದವರು. ಇವರು ಹಿಂಸೆಯನ್ನು ನೇರವಾಗಿ ಉಪಯೋಗಿಸಿಕೊಂಡು ಸ್ತ್ರೀಯರನ್ನು ಆಳುತ್ತಾರೆ. ಕ್ರಮೇಣ ಇದು ಸಾಂಸ್ಥಿಕ ಸ್ವರೂಪವನ್ನು ಪಡೆಯಿತು.

ಶಾರೀರಕ ರಚನೆಯೇ ನಿರ್ಣಾಯಕವಾದರೆ ಸಮಾಜ ವನ್ನು ಬದಲಾವಣೆ ಮಾಡುವುದು ಹೇಗೆ ? ಲೈಂಗಿಕ ವರ್ಗವ್ಯವಸ್ಥೆ ಹಾಗೂ ಆರ್ಥಿಕ ವರ್ಗವ್ಯವಸ್ಥೆಗಳನ್ನು ಸ್ವಾಯತ್ತವಾದುದೆಂದು ವಾದಿಸಿ, ಅವುಗಳಿಗಿರುವ ಸಂಬಂಧದ ಬಗ್ಗೆ ಪರಿಶೋಧಿಸದೇ ಇರುವುದಕ್ಕಾಗಿ ರ್‍ಯಾಡಿಕಲ್ ಸ್ತ್ರೀವಾದಿಗಳನ್ನು ಟೀಕಿಸಲಾಗಿದೆ. ಹೀಗಿದ್ದರೂ ಹಿಂಸೆ ಮತ್ತು ಪಿತೃಪ್ರಧಾನ ವ್ಯವಸ್ಥೆಗೆ ತಾತ್ವಿಕ ಸ್ವರೂಪ ಮತ್ತು ಸ್ತ್ರೀಯರ ಶೋಷಣೆಯ ಬಗ್ಗೆ ಆಳವಾದ ಒಳನೋಟಗಳನ್ನು ನೀಡಿ ಮಹತ್ವವಾದ ಕೊಡುಗೆಯನ್ನು ನೀಡಿದ್ದಾರೆ.

ರ್‍ಯಾಡಿಕಲ್ ಸ್ತ್ರೀವಾದಿಗಳು ವಿಭಿನ್ನವಾದ ವಾಸ್ತವಿಕತೆಯನ್ನು ಹೊರಗೆಡವಿದ್ದಾರೆ. ಪುರುಷರು ಸ್ತ್ರೀಯರ ದೇಹದ ಮೇಲೆ ಹೊಂದಿರುವ ನಿಯಂತ್ರಣ ಹಾಗೂ ಒತ್ತಾಯದ ತಾಯ್ತನ ಅಥವಾ ಲೈಂಗಿಕ ಗುಲಾಮಗಿರಿಯ ಜಗತ್ತನ್ನು ನಮಗೆ ತೋರಿಸಿಕೊಟ್ಟಿದ್ದಾರೆ. ಇದು ಹೇಗೆ ಸಂಭವಿಸುತ್ತದೆ, ಮಹಿಳೆಯರು ತಪ್ಪಿಸಿಕೊಂಡು ಬರಲು ಕೆಲವೇ ಅವಕಾಶವನ್ನು ಒದಗಿಸುವ ಒಂದಕ್ಕೊಂದು ತಳುಕು ಹಾಕಿಕೊಂಡಿರುವ ಪುರುಷಪ್ರಧಾನ ಸಂಸ್ಥೆಗಳನ್ನ ಕುರಿತು ಪ್ರಾತ್ಯಕ್ಷಿಕ ಪಡಿಸುತ್ತದೆ. ಇಂತಹ ಸಂಸ್ಥೆಗಳಲ್ಲಿ ಮಾನಸಿಕ ಆಘಾತಕ್ಕೊಳಗಾದ ಮಹಿಳೆಯರನ್ನು ಕುರಿತು ಒಳನೋಟಗಳನ್ನು ರ್‍ಯಾಡಿಕಲ್ ಸ್ತ್ರೀವಾದ ನೀಡುತ್ತದೆ. ಆದರೂ ರ್‍ಯಾಡಿಕಲ್ ಸ್ತ್ರೀವಾದ ಪಿತೃಪ್ರಧಾನತೆಯ ಹಿಂದಿರುವ ಕಾರಣಗಳನ್ನು ಗುರುತಿಸಲು ವಿಫಲವಾಗಿದೆ. ಪುರುಷರು ಏಕೆ ಇಂತಹ ಸಂಸ್ಥೆಗಳನ್ನು ಕಟ್ಟಿದರು ? ಏಕೆ ಇಂತಹ ಸಂಸ್ಥೆಗಳನ್ನು ಉಳಿಸಿಕೊಳ್ಳುತ್ತಿದ್ದಾರೆ ?

### ಸಮಾಜವಾದಿ ಸ್ತ್ರೀವಾದಿಗಳ ನಿಲುವು

ಸಮಾಜವಾದಿ ಸ್ತ್ರೀವಾದಿಗಳು ಮಾರ್ಕ್ಸ್‌ವಾದದ ಮೂಲ ತತ್ವಗಳನ್ನು ಉಪಯೋಗಿಸಿಕೊಂಡಿದ್ದರೂ ಸಂಪ್ರದಾಯವಾದಿ ಮಾರ್ಕ್ಸ್‌ವಾದಿ ತತ್ವ ನಿರ್ಲಕ್ಷಿಸಿದ್ದ ಕೆಲವು ಕ್ಷೇತ್ರಗಳನ್ನು ಗುರುತಿಸಿ ಪುಷ್ಟಿಗೊಳಿಸಿದೆ. ರ್‍ಯಾಡಿಕಲ್ ಸ್ತ್ರೀವಾದ ಹಾಗೂ ಮಾರ್ಕ್ಸ್‌ವಾದಿ ತತ್ವಗಳನ್ನು ಇವರು ಸಂಯೋಜಿಸಲು ಪ್ರಯತ್ನಿಸಿದ್ದಾರೆ. ಈ ಎರಡೂ ತತ್ವಗಳೂ ಅಪಾರವಾದ ಕೊಡುಗೆಯನ್ನು ನೀಡಿದ್ದರೂ, ಅಪರಿಪೂರ್ಣವಾಗಿವೆಯೆಂದು ಸಮಾಜವಾದಿ ಸ್ತ್ರೀವಾದಿಗಳು ಭಾವಿಸುತ್ತಾರೆ.

ಇತಿಹಾಸ ಮತ್ತು ಭೌತವಾದದ ಬಗ್ಗೆ ಇವರಿಗಿರುವ ಬಲವಾದ ನಂಬಿಕೆ ಮತ್ತು ಲೈಂಗಿಕ ಶ್ರಮ ವಿಭಜನೆಯಲ್ಲಿ ಇರುವ ವೈವಿಧ್ಯತೆಯನ್ನು ಗುರುತಿಸುವುದರಿಂದ, ಪಿತೃಪ್ರಧಾನ ವ್ಯವಸ್ಥೆ ಸರ್ವಕಾಲಿಕ ಹಾಗೂ ಅಚಲವಾದುದೆಂದು ಇವರು ಭಾವಿಸುವುದಿಲ್ಲ. ಐತಿಹಾಸಿಕವಾಗಿ ಗಂಡು ಮತ್ತು ಹೆಣ್ಣಿನ ನಡುವಿನ ಸಂಘರ್ಷವು ಉತ್ಪಾದನಾ ವಿಧಾನದಲ್ಲಿ ಉಂಟಾದ ಬದಲಾವಣೆಯೊಂದಿಗೆ ಬದಲಾಗುತ್ತದೆಯೆಂದು ಸಮಾಜವಾದಿ ಸ್ತ್ರೀವಾದಿಗಳು ಭಾವಿಸುತ್ತಾರೆ.

ಆರ್ಥಿಕ ವರ್ಗ ಹಾಗೂ ಲೈಂಗಿಕ ವರ್ಗ ಸಮಾಜದ ಎರಡು ವೈರುಧ್ಯಗಳೆಂದು ಭಾವಿಸಿ ಅವೆರಡರ ನಡುವಿನ ಸಂಬಂಧವನ್ನು ಗುರುತಿಸಲು ಇವರು ಪ್ರಯತ್ನಿಸುತ್ತಾರೆ. ಇವರ ಪ್ರಕಾರ ಪಿತೃಪ್ರಧಾನತೆಗೂ ಆರ್ಥಿಕ ಪದ್ಧತಿಗೂ ಸಂಬಂಧವಿದೆ ; ಉತ್ಪಾದನಾ ಸಂಬಂಧಗಳಿಗೂ ಪಿತೃಪ್ರಧಾನತೆಗೂ ಸಂಬಂಧವಿದೆ. ಈ ಸಂಬಂಧ ಕೇವಲ ಆಕಸ್ಮಿಕವಲ್ಲ. ಪಿತೃಪ್ರಧಾನತೆಯ ಮೇಲೆ ಪ್ರಭಾವ ಬೀರುವ ಇನ್ನಿತರ ಶಕ್ತಿಗಳೂ ಇವೆ. ಇವುಗಳನ್ನು ಬಲಪಡಿಸುವಲ್ಲಿ ಸಿದ್ಧಾಂತ (ideology) ಮಹತ್ತರವಾದ ಪಾತ್ರವಹಿಸುತ್ತದೆ, ಖಾಸಗೀ ಆಸ್ತಿಯ ಪರಿಕಲ್ಪನೆಗಿಂತ ಮೊದಲೇ ಪಿತೃಪ್ರಧಾನತೆ ಅಸ್ತಿತ್ವದಲ್ಲಿತ್ತೆಂದು ಕೆಲವರು ನಂಬುತ್ತಾರೆ. ಸ್ತ್ರೀಯರ ಶೋಷಣೆಯ ಕಾರಣದಿಂದ ಇದು ಸಾಧ್ಯವಾಗಿದೆ. ಪಿತೃಪ್ರಧಾನತೆ, ಖಾಸಗೀ ಆಸ್ತಿಯ ಬೆಳವಣಿಗೆಯ ಕೂಸಲ್ಲದ ಕಾರಣ ಖಾಸಗೀ ಆಸ್ತಿಯು ರದ್ದಾದೊಡನೆ ಪಿತೃಪ್ರಧಾನ

ತೆಯು ನಾಶವಾಗುವುದಿಲ್ಲ. ಅವರು ತಮ್ಮ ವಿಶ್ಲೇಷಣೆಯಲ್ಲಿ ಉತ್ಪಾದನಾ ಸಂಬಂಧಗಳು ಹಾಗೂ ಸಂತಾನೋತ್ಪತ್ತಿ, ಕುಟುಂಬ, ಮನೆಗೆಲಸ ಈ ಕ್ಷೇತ್ರಗಳನ್ನು ಸಂಪೂರ್ಣವಾಗಿ ನಿರ್ಲಕ್ಷಿಸಿದ್ದಾರೆ. ಅಥವಾ ಇವುಗಳ ಬಗ್ಗೆ ಅಪರಿಪೂರ್ಣವಾದ ನೋಟಗಳನ್ನು ನೀಡಿದ್ದಾರೆ. ಆದರೆ ಸಮಾಜವಾದಿ ಸ್ತ್ರೀವಾದಿಗಳು ತಮ್ಮ ಗಮನವನ್ನು ಈ ಕ್ಷೇತ್ರಗಳ ಮೇಲೆ ಕೇಂದ್ರೀಕರಿಸಿದ್ದಾರೆ.

ಸಮಾಜವಾದಿ ಸ್ತ್ರೀವಾದಿಗಳು "ಪ್ರಾಥಮಿಕವಾದ ಅಥವಾ ಪ್ರಮುಖ ವೈರುದ್ಯಗಳು" ಮುಂತಾದ ಭಾಷೆಯನ್ನ ಬಳಸುವುದಿಲ್ಲ. ಜೊತೆಗೆ ವರ್ಗ ಅಥವಾ ಲಿಂಗಾಧಾರಿತ ವ್ಯವಸ್ಥೆ ಒಂದಕ್ಕೊಂದು ಮೂಲಭೂತವಾದುದೆಂಬ ವಾದವನ್ನು ಗುಮಾನಿಯಿಂದ ನೋಡುತ್ತಾರೆ. ವಿಭಿನ್ನ ಶೋಷಿತ ವ್ಯವಸ್ಥೆಗಳು ಒಂದಕ್ಕೊಂದು ತಳುಕು ಹಾಕಿಕೊಂಡಿವೆಯೆಂದು ಇವರು ಭಾವಿಸುತ್ತಾರೆ.

**ಪ್ರಶ್ನೆ : ಸಮಾಜವಾದಿ ಸ್ತ್ರೀವಾದಿಗಳಲ್ಲೇ ಇರುವ ವಿಭಿನ್ನ ಆಲೋಚನಾ ಕ್ರಮಗಳನ್ನು ನಾವು ಚರ್ಚಿಸಬಹುದೆ ?**

ಉತ್ತರ : ಕೆಲವು ವಿಚಾರಗಳಿಗೆ ಹೆಚ್ಚು ಒತ್ತು ಕೊಡುವುದು, ಕೇಂದ್ರೀಕರಿಸುವುದು, ಚಿಂತನಾಕ್ರಮಗಳನ್ನು ಉಪಯೋಗಿಸಿ ಕೊಳ್ಳುವುದರಲ್ಲೇ ವ್ಯತ್ಯಾಸಗಳು ಕಂಡು ಬರುತ್ತವೆ. ಸಮಾಜವಾದಿ ಸ್ತ್ರೀವಾದಿ ಚಿಂತಕಿಯಾದ ಜಿಲ್ಲಾ ಐಸೆನ್‌ಸ್ಟೈನ್‌ಳು 'ತಾಯಿಯಾಗಿ, ಕೆಲಸಗಾರಳಾಗಿ, ಹೆರುವಳಾಗಿ, ಉತ್ಪಾದಕಳಾಗಿ ಸ್ತ್ರೀಯರ ಸಮಸ್ಯೆಯನ್ನು ಕ್ರೋಢೀಕರಿಸುವುದೇ ನಮ್ಮ ಪ್ರಮುಖ ಕಾಳಜಿಯಾಗಿದೆ, ಯೆಂದು ಹೇಳುತ್ತಾಳೆ. ಪುರುಷ ಪ್ರಧಾನ್ಯತೆ ಮತ್ತು ಬಂಡವಾಳಶಾಹಿ ವ್ಯವಸ್ಥೆ ಒಂದಕ್ಕೊಂದು ಆಳವಾದ ಸಂಬಂಧವನ್ನು ಹೊಂದಿ ಸ್ತ್ರೀಯರ ಶೋಷಣೆಗೆ ನಿರ್ಣಾಯಕವಾಗಿದೆ ಎಂದು ಈಕೆವಾದಿಸುತ್ತಾಳೆ. ಒಂದು ಕಡೆ ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಶೋಷಣೆ, ಮತ್ತೊಂದು ಕಡೆ ಪಿತೃಪ್ರಧಾನ ಲಿಂಗಾಧಾರಿತ ಶ್ರೇಣೀಕೃತ ವ್ಯವಸ್ಥೆಯಲ್ಲಿ ಸ್ತ್ರೀ ತಾಯಿಯಾಗಿ, ಮನೆಕೆಲಸದವಳಾಗಿ, ಗ್ರಾಹಕಿಯಾಗಿ ಶೋಷಣೆಗೆ ಒಳಗಾಗುತ್ತಿರುವುದನ್ನು ನಮ್ಮ ಸಮಾಜ ಒಳಗೊಂಡಿದೆಯೆಂದು ಆಕೆ ಹೇಳುತ್ತಾಳೆ. ಪಿತೃ ಪ್ರಧಾನ ವ್ಯವಸ್ಥೆ ಶಾರೀರಿಕ ವ್ಯತ್ಯಾಸದಿಂದ ಮೂಡಿಬಂದುದಲ್ಲ, ಇದು "ವ್ಯತ್ಯಾಸ" ರಾಜಕೀಯ ಅಥವಾ ತಾತ್ವಿಕ ವ್ಯಾಖ್ಯಾನದಿಂದ ಬಂದುದೆಂದು ಆಕೆ ವಾದಿಸುತ್ತಾಳೆ. ಇದಕ್ಕೆ ಸಂತಾನೋತ್ಪತ್ತಿಯ ಸಾಮಾಜಿಕ ಸಂಬಂಧಗಳು ಅಥವಾ ಲಿಂಗ ಪದ್ಧತಿ ಎಂದು ಕರೆಯಲಾಗಿದೆ. ಈ ಸಂತಾನೋತ್ಪತ್ತಿಯ ಸಂಬಂಧಗಳು ವಿಶೇಷವಾಗಿ ಬಂಡವಾಳಶಾಹಿ ಸಂಬಂಧಗಳಾಗಿಲ್ಲ. ಅವು ಐತಿಹಾಸಿಕವಾಗಿ ಒಂದು ಕಾಲದಿಂದ ಇನ್ನೊಂದು ಕಾಲಕ್ಕೆ ಸಾಗಿ ಬರುವ ಸಾಂಸ್ಕೃತಿಕ ಸಂಬಂಧಗಳೆಂದು ಜಿಲ್ಲಾ ಐಸೆನ್‌ಸ್ಟೈನ್ ಹೇಳುತ್ತಾಳೆ. ಸಮಾಜದ ಆರ್ಥಿಕ ಸಂಸ್ಥೆಗಳು ಬದಲಾವಣೆಯಾಗಬಹುದು ಆದರೆ ಪಿತೃಪ್ರಧಾನ ವ್ಯವಸ್ಥೆ ಸಂತಾನೋತ್ಪತ್ತಿಯ ಸಾಮಾಜಿಕ ಸಂಬಂಧಗಳೊಂದಿಗೆ ಬೆಸೆದುಕೊಂಡು ಬಂಡವಾಳಶಾಹಿ ಸಮಾಜದ ವಿಭಿನ್ನ ಸಾಮಾಜಿಕ ಸಂಸ್ಥೆಗಳಿಗೆ ಶ್ರೇಣೀಕೃತ ಸ್ವರೂಪ ಹಾಗೂ ನಿಯಂತ್ರಣವನ್ನು ಒದಗಿಸುತ್ತದೆ.

ಸಮಾಜವಾದಿ ಸ್ತ್ರೀವಾದಿಗಳ ಒಂದು ಗುಂಪು 'ಪಿತೃಪ್ರಧಾನ'ತೆ ಐತಿಹಾಸಿಕವಲ್ಲದ ಪರಿಕಲ್ಪನೆಯೆಂದು ತಿರಸ್ಕರಿಸುತ್ತಾರೆ. ಪರ್ಯಾಯವಾಗಿ "ಸ್ತ್ರೀಯರ ಪರಾಧೀನತೆ" ಎಂಬ ಕಲ್ಪನೆಯನ್ನು ಬಳಸುತ್ತಾರೆ. ಇತಿಹಾಸದಲ್ಲಿ ಗಂಡು ಹೆಣ್ಣಿನ ನಡುವೆ ವಿಭಿನ್ನವಾದ ಸಂಬಂಧಗಳು ಅಸ್ತಿತ್ವದಲ್ಲಿದ್ದುದರಿಂದ ಪಿತೃಪ್ರಧಾನತೆಯ ಕಲ್ಪನೆ ಸಾರ್ವತ್ರಿಕವಾಗಿ ಅಂಗೀಕೃತವಾದುದಲ್ಲವೆಂದು ಇವರು ವಾದಿಸುತ್ತಾರೆ. ಇವರ ಪ್ರಕಾರ ಲಿಂಗಪ್ರಜ್ಞೆಗಿಂತ ಲಿಂಗ ವ್ಯವಸ್ಥೆ ಮುಖ್ಯವಾದುದು. ಏಕೆಂದರೆ ಲಿಂಗದ ಮೂಲಕ ಗುರುತಿಸುವುದು ಶಾರೀರಕವಾದುದು. ಆದರೆ ಲಿಂಗವ್ಯವಸ್ಥೆ ಸಾಮಾಜಿಕವಾದುದು. ಈ ಗುಂಪಿನ ಸ್ತ್ರೀವಾದಿಗಳು ಲಿಂಗವ್ಯವಸ್ಥೆ ಸಂಬಂಧಗಳಿಗೆ ಹೆಚ್ಚು ಒತ್ತು ನೀಡುತ್ತಾರೆ.

ಜಂಡರ್‌ನಂತಹ ಪರಿಕಲ್ಪನೆಯನ್ನು ಉಪಯೋಗಿಸುವುದರಿಂದಾಗಿ ವಿಶ್ಲೇಷಣ ಸಾಧನವಾಗಿ . ಹಾಗೂ ಹೋರಾಟದ ಪರಿಕಲ್ಪನೆಯಾಗಿ ಉಪಯೋಗಿಸುತ್ತಿರುವ ಪಿತೃಪ್ರಧಾನತೆಯನ್ನು ಅಪ್ರಮುಖಗೊಳಿಸಿದಂತಾಗುತ್ತದೆಯೆಂದು ಕೆಲವರು ವಾದಿಸಿದ್ದರೂ, ಈ ವಿಚಾರಧಾರೆ ಹಲವಾರು ಸ್ತ್ರೀವಾದಿಗಳಲ್ಲಿ ಹಾಗೂ ಅಭಿವೃದ್ಧಿ ಸಂಸ್ಥೆಗಳಲ್ಲಿ ಚಾಲ್ತಿಯಲ್ಲಿದೆ.

ಪಿತೃಪ್ರಧಾನತೆ ಹಾಗೂ ಬಂಡವಾಳಶಾಹಿ ತತ್ವವನ್ನು ಬೆಳೆಸಿದವರಲ್ಲಿ ಹೈಡಿ ಹಾರ್ಟ್‌ಮನ್ ಒಬ್ಬರು. ಈ ವಿಚಾರಧಾರೆ ಪಿತೃಪ್ರಧಾನತೆ ಹಾಗೂ ಬಂಡವಾಳಶಾಹಿ

ಪದ್ಧತಿಗೆ ಸಂಬಂಧವನ್ನು ಕಲ್ಪಿಸುವುದರ ಜೊತೆಗೆ ವಿಭಿನ್ನ ವರ್ಗಕ್ಕೆ ಸೇರಿದ ಪುರುಷರನ್ನು ಪಿತೃಪ್ರಧಾನತೆ ಒಂದೇ ವರ್ಗಕ್ಕೆ ಸೇರಿಸುತ್ತದೆ. ಸ್ತ್ರೀಯರ ಕೆಲಸ ಪುರುಷ ಹಾಗೂ ಬಂಡವಾಳಶಾಹಿ ಪದ್ಧತಿ ಎರಡಕ್ಕೂ ಲಾಭಕರ ವಾಗಿದೆ. ಪಿತೃಪ್ರಧಾನತೆ ಭೌತಿಕವಾದ ತಳಹದಿಯನ್ನು ಹೊಂದಿದ ಸಂಬಂಧಗಳ ಸರಮಾಲೆ. ಇಲ್ಲಿ ಪುರುಷರ ನಡುವೆ ಶ್ರೇಣಿಕೃತ ಸಂಬಂಧಗಳಿರುತ್ತವೆ. ಪುರುಷರ ನಡುವೆ ಒಗ್ಗಟ್ಟಿರುತ್ತದೆ. ಇದು ಮಹಿಳೆಯರ ಮೇಲೆ ಪ್ರಭುತ್ವವನ್ನು ಸಾಧಿಸಲು ನೆರವಾಗುತ್ತದೆಯೆಂದು ಹಾರ್ಟಮನ್ ವಾದಿಸುತ್ತಾರೆ. ಸ್ತ್ರೀಯರ ಶ್ರಮಶಕ್ತಿಯ ಮೇಲೆ ಪುರುಷರು ಹೊಂದಿರುವ ನಿಯಂತ್ರಣವೇ ಪಿತೃ ಪ್ರಧಾನತೆಯ ಭೌತಿಕ ತಳಹದಿ.

**ಹೈಡಿ ಹಾರ್ಟ್‌ಮನ್ ಹೇಳುತ್ತಾರೆ**

"ಸಮಾಜವಾದಿ ಸ್ತ್ರೀವಾದಿಗಳಾಗಿ ನಾವು ಪಿತೃ ಪ್ರಧಾನತೆ ಮತ್ತು ಬಂಡವಾಳಶಾಹೀ ಪದ್ಧತಿ ಎರಡರ ವಿರುದ್ಧವೂ ಹೋರಾಡಬೇಕಾಗುತ್ತದೆ. ನಾವು ಕಟ್ಟ ಬಯಸುವ ಸಮಾಜದಲ್ಲಿ ಪರಸ್ಪರಾವಲಂಭನೆ ಎನ್ನು ವುದು ವಿಮೋಚನೆಯೇ ವಿನಃ ಅಪಮಾನಕರವಾದುದಲ್ಲ. ಪೋಷಣೆ ಮಾಡುವುದು ವಿಶ್ವಾತ್ಮಕವಾದ ಅಂಗವಾಗಿರು ತ್ತದೆಯೇ ವಿನಃ ಉಸಿರುಗಟ್ಟಿಸುವಂಥದ್ದಲ್ಲ ಮತ್ತು ಇಲ್ಲಿ ಪುರುಷರಿಗೇ ನಿರ್ಮಿತವಾಗಿರುವಂತಹ ಸುಳ್ಳುಸುಳ್ಳಾದ ಸ್ವಾತಂತ್ರದ ಕಲ್ಪನೆಯನ್ನು ಬೆಂಬಲಿಸದಿರುವಂತಹ ಸ್ಥಿತಿ ಇರಬೇಕು."

ಪ್ರಮುಖವಾದ ಸಮಾಜವಾದಿ ಸ್ತ್ರೀವಾದಿ ದೃಷ್ಟಿ ಕೋನವನ್ನು ಮರಿಯಾ ಮಿಸ್‌ಳ "ದ ಸೋಷಿಯಲ್ ಆರಿಜಿನ್ ಆಫ್ ದ ಸೆಕ್ಷುಯಲ್ ಡಿವಿಜನ್ ಆಫ್ ಲೇಬರ್" ಎಂಬ ಲೇಖನದಲ್ಲಿ ನೀಡಲಾಗಿದೆ. ಜಂಡರ್ ಶ್ರೇಣೀಕೃತ ವ್ಯವಸ್ಥೆ ಅಥವಾ ಪಿತೃಪ್ರಧಾನತೆಯ ಉಗಮಕ್ಕೆ ಪೂರಕ ವಾದ ಐತಿಹಾಸಿಕ ಬೆಳವಣಿಗೆಯ ಕಾರಣಗಳ ಬಗ್ಗೆ ಕೆಲವು ಆಲೋಚನೆಗಳನ್ನು ಈಕೆ ನಮ್ಮ ಮುಂದೆ ಇಡುತ್ತಾರೆ. ಸ್ತ್ರೀವಾದಿ ಸಂಘಟನೆಗಳಲ್ಲಿ ಎಷ್ಟೇ ತಾತ್ವಿಕ ಭಿನ್ನತೆ ಇದ್ದರೂ, ಗಂಡು-ಹೆಣ್ಣಿನ ನಡುವೆ ಇರುವ ಶ್ರೇಣೀಕೃತ ವ್ಯವಸ್ಥೆಯ ವಿರುದ್ಧ ಪ್ರತಿಭಟಿಸುವಲ್ಲಿ ಎಲ್ಲರೂ ಒಂದಾಗಿ ದ್ದಾರೆ. ಶಾರೀರಿಕ ರಚನೆಯೇ ನಿರ್ಣಾಯಕವೆಂಬುದನ್ನು ತಳ್ಳಿ ಹಾಕಲಾಗಿದೆಯೆಂದು ಈಕೆ ಈ ಲೇಖನದಲ್ಲಿ ಹೇಳುತ್ತಾಳೆ. ಅಸಮಾನತೆಯ ಸಾಮಾಜಿಕ ತಳಹದಿಯ ಪರಿಶೋಧನೆಯೇ ಈ ಪ್ರತಿಭಟನೆಯ ಅವಶ್ಯಕ ಪರಿ ಣಾಮ. ಸ್ತ್ರೀವಾದಿಗಳ ತತ್ವ ಮತ್ತು ಆಚರಣೆಯ ನಡುವಿರುವ ಆಪ್ತ ಸಂಬಂಧವನ್ನು ಕುರಿತು ಒತ್ತು ನೀಡುವ ಮರಿಯಾ ಮಿಸ್ ಹೀಗೆ ಹೇಳುತ್ತಾಳೆ ;

"ಸಾವಿರಾರು ವರ್ಷಗಳಿಂದ ನಡೆದು ಬಂದಿರುವ ಮಹಿಳಾ ಶೋಷಣೆಯ ವಿರುದ್ಧದ ಹೋರಾಟದಲ್ಲಿ ತಮ್ಮನ್ನು ತೊಡಗಿಸಿಕೊಂಡ ಮಹಿಳೆಯರು ಶಾಸ್ತ್ರಜ್ಞರು ನೀಡುವ "ಪಿತೃಪ್ರಧಾನತೆಯ ಉಗಮದ ಬಗ್ಗೆ ನಮಗೆ ತಿಳಿದಿರುವುದು ಅತಿ ಕಡಿಮೆಯಾದುದರಿಂದ ಅದರ ಬಗ್ಗೆ ಪ್ರಶ್ನೆ ಕೇಳಬಾರದು" ಎಂಬ ತಣ್ಣನೆಯ ವಿವರಣೆಯಿಂದ ತೃಪ್ತಿ ಪಡೆಯುವಂತಿಲ್ಲ. ಈ ಸಂಬಂಧದ ಸಾಮಾಜಿಕ ಉಗಮದ ಹುಡುಕಾಟ ಮಹಿಳೆಯರ ಹೋರಾಟದ ರಾಜಕೀಯ ತಂತ್ರಗಾರಿಕೆಯ ಒಂದು ಭಾಗ. ಗಂಡು ಹೆಣ್ಣಿನ ನಡುವಿರುವ ಅಸಮಾನತೆಯ ತಳಹದಿಯನ್ನು ಅರ್ಥಮಾಡಿಕೊಳ್ಳದೇ ಅದನ್ನು ತೊಡೆದು ಹಾಕಲು ಸಾಧ್ಯವಿಲ್ಲ.

●

---

## ವಿಪರ್ಯಾಸ

ಕಸದ ತೊಟ್ಟಿಯಲೊಂದು ಕಂದ  
ಆಗದೇ ಪ್ರಸವಿಸಿ ಬಸುಟ ಎಳೆಗರುಳು  
ಕರುಳಾದರೂ ವಿಡಿಯದೇ  
ಮೈಕಾವಿಗೆ ಮರುಳಾಗಿ ಜಾರಿ  
ಬಿಸಾಕಿ ಬಿಕನಾಸಿಯಾಗಿಸಿದ ಕುವರಿ  
ಲೋಕದಾ ಬಿರುಮಾತಿಗೆ ಹೆದರಿ  
ಕರುಳು ಬಳ್ಳಿ ಕಸದ ತೊಟ್ಟಿಯಲಿ

○ ನಾಗರತ್ನ ನಾಡಿಗ್

# ಮಹಿಳೆ ಮತ್ತು ವರದಕ್ಷಿಣೆ

● ಎಸ್. ಎಂ. ಮಂಗಳಾ

ನಮ್ಮ ದೇಶದಲ್ಲಿ ಸ್ತ್ರೀಯು ಶುಭದ ಮಂಗಳಕರ, ಸೌಭಾಗ್ಯದ ಪ್ರತೀಕವಾಗಿದ್ದಾಳೆ. ಆದಿಶಕ್ತಿ, ಲೋಕ ಮಾತೆ, ಭಾಗ್ಯಲಕ್ಷ್ಮಿ, ಮಾನವ ಕುಲೋದ್ಧಾರಕಳು, ಶಾಂತಿ ಸಹನೆಗೆ ಹೆಸರಾಗಿದ್ದು, ಇಂದಿಗೂ ದೇವಿ-ಮಾತೆ ಎಂಬುದಾಗಿ ಪೂಜಿಸುತ್ತೇವೆ.

ಭೋಜೇಷು ಮಾತಾ । ಶಯನೇಷು ವೇಶ್ಯಾ ।
ಕಾರ್ಯೇಷುದಾಸಿ । ಕರಣೇಷು ಮಂತ್ರಿ ।
ಕ್ಷಮಯಾಧರಿತ್ರಿ ॥

ಹೀಗೆಲ್ಲಾ ಶಾಸ್ತ್ರಗಳಲ್ಲಿಯೂ ಉಲ್ಲೇಖವಿದೆ. ಇವೆಲ್ಲವೂ ಒಂದು ರೀತಿಯಲ್ಲಿ ಹೆಣ್ಣಿನ ಬಗ್ಗೆ ಒಂದು ಪವಿತ್ರ ಭಾವನೆಯನ್ನು ಮೂಡಿಸುವಂತಹದ್ದೇ ಆಗಿದೆ. ಅಲ್ಲದೆ ನಮ್ಮ ನಾಡಿನಲ್ಲಿ ಹೆಣ್ಣು ಹಿಂದೂ ಸಂಸ್ಕೃತಿಯ ಪ್ರತೀಕವೆಂದು ಹಾಡಿ ಹೊಗಳುವ ಸಮಾಜವೇ ಆಕೆಯನ್ನು ಕೀಳುಮಟ್ಟಕ್ಕೆ ತಳ್ಳುವಂತಹ ಪರಿಸ್ಥಿತಿಗೆ ಇಳಿಸಿ ಬಿಟ್ಟಿದೆ. ಸಾಮಾಜಿಕವಾಗಿ ಆಕೆಯ ಸ್ಥಾನಮಾನವೂ ಒಂದು ರೀತಿಯಲ್ಲಿ ಎರಡನೆಯ ದರ್ಜೆ ಪ್ರಜೆಯಾಗಿಯೇ ಬದುಕುವಂತಹದ್ದಾಗಿದೆ.

ಸಂವಿಧಾನಾತ್ಮಕವಾಗಿ ಸ್ತ್ರೀ–ಪುರುಷರಿಬ್ಬರೂ ಸಮಾನ ಅವಕಾಶಗಳು ಇದ್ದಾಗ್ಯೂ, ಅವು ಸಂಪೂರ್ಣವಾಗಿ, ಮಹಿಳೆಯರನ್ನು ತಲುಪಿಲ್ಲ. ಅದಕ್ಕೆ ಕಾರಣ ನಮ್ಮ ದೇಶದ ಸಾಮಾಜಿಕ ವ್ಯವಸ್ಥೆಯೆಂದು ಹೇಳಬಹುದು. ಆದರೂ ಮಹಿಳೆ-ಪುರುಷರಿಬ್ಬರೂ ಸರಿ ಸಮಾನರೆಂದು ಪ್ರತಿಪಾದಿಸುತ್ತಿರುವ ಈ ಕಾಲದಲ್ಲೂ ವರದಕ್ಷಿಣೆಯೆಂಬ ಪಿಡುಗಿಗೆ ಅನೇಕ ಹೆಣ್ಣುಮಕ್ಕಳು ಇಂದಿಗೂ ಬಲಿಯಾಗುತ್ತಿದ್ದಾರೆ. ದಿನನಿತ್ಯ ನೋಡುವ ಟೀವಿ, ರೇಡಿಯೋ, ಓದುವ ಪತ್ರಿಕೆ ಒಂದಲ್ಲ ಎರಡಲ್ಲ ಹತ್ತು ಹಲವು ಮಾಧ್ಯಮಗಳ ಮೂಲಕ ತಿಳಿಯಬಹುದಾಗಿದೆ. ಅಲ್ಲದೆ ಈ ವರದಕ್ಷಿಣೆಯ ಭೂತವು ಶ್ರೀಮಂತ ಬಡವ, ವಿದ್ಯಾವಂತ-ಅವಿದ್ಯಾವಂತರೆಂಬ ಬೇಧವಿಲ್ಲದೆ ಎಲ್ಲರನ್ನೂ ಕಾಡುತ್ತಿದೆ.

ಸಮಾಜದ ಪ್ರತಿಯೊಂದು ವರ್ಗದಲ್ಲೂ ಅವರವರ ಅಂತಸ್ತಿಗೆ ಅನುಗುಣವಾಗಿ ವರದಕ್ಷಿಣೆಯ ಮೊತ್ತ ನಿರ್ಧರಿಸಲ್ಪಡುತ್ತಿದೆ. ಶ್ರೀಮಂತರಲ್ಲಿ ಕಾರು, ಫ್ರಿಜ್, ಬಂಗಲೆಗಳಾದರೆ ಬಡವರಲ್ಲಿ ಹಾಗೂ ಮಧ್ಯಮ ವರ್ಗಗಳಲ್ಲಿ ಇಂತಿಷ್ಟು ಹಣ ಬಂಗಾರ ಎಂಬುದಾಗಿ ಕೊಡಲೇ ಬೇಕಾಗುತ್ತದೆ. ಇದು ಒಂದು ರೀತಿಯಲ್ಲಿ ಹೇರುವಿಕೆಯಾಗಿದ್ದು, ಅನೇಕ ಕುಟುಂಬಗಳಲ್ಲಿ ಹೆಣ್ಣು ಮಕ್ಕಳ ಪಾಡು ಚಿಂತಾಜನಕವಾಗಿದೆ. ಈ ಎಲ್ಲಾ ತೊಂದರೆಗಳನ್ನು ಅನುಭವಿಸುವುದಕ್ಕಿಂತಲೂ, ಜೀವನದಲ್ಲಿ ಮದುವೆಯೇ ಬೇಡವೆನ್ನುವ ಹೆಣ್ಣುಮಕ್ಕಳು ಇಲ್ಲದೆ ಇಲ್ಲ. ಆದರೆ ಅಪ್ಪ-ಅಮ್ಮ, ಬಂಧು-ಬಳಗದವರ ಒತ್ತಾಸೆಯ ಮೇರೆಗೆ ಮದುವೆಯಾಗುವ ಎಷ್ಟೋ ಹೆಣ್ಣು ಮಕ್ಕಳೂ ಕೂಡ ಈ ವರದಕ್ಷಿಣೆಯೆಂಬ ಭೂತಕ್ಕೆ ಬಲಿಯಾಗುತ್ತಿದ್ದಾರೆ.

ಅತ್ತೆ ಮಾವಂದಿರ, ಹಾಗೂ ಗಂಡನ ಹಿಂಸೆಗೆ ಒಳಗಾಗಿ ಹಲವಾರು ಹೆಣ್ಣುಮಕ್ಕಳು, ತಾವೇ ಸ್ವತಃ ಆತ್ಮಹತ್ಯೆ ಮಾಡಿಕೊಂಡರೆ, ಮತ್ತೆ ಕೆಲವರು ಅತ್ತೆ ಮಾವಂದಿರಿಂದಲೇ ಸೀಮೆಎಣ್ಣೆ ಅಥವಾ ಹೊಡೆತಗಳಿಂದಲೋ ತಮ್ಮ ಜೀವನವನ್ನು ಕಳೆದುಕೊಳ್ಳುವುದು ಸರ್ವೇ ಸಾಮಾನ್ಯವಾಗಿದೆ. ಇಂತಹ ತಮ್ಮ ಸಾವು-ಬದುಕಿನ ನಡುವೆ ಹೋರಾಟ ನಡೆಸುತ್ತಿರುವ ಸಂದರ್ಭದಲ್ಲಿಯೂ ಹೆಣ್ಣು ತಾನು ನಿಜಸ್ಥಿತಿ ಹೇಳಲೂ ಕೂಡ ಹಿಂಜರಿಯುತ್ತಿರುತ್ತಾಳೆ. ಏಕೆಂದರೆ, ತಾನೊಮ್ಮೆ ಬದುಕಿದರೆ ಮತ್ತೆ ಅತ್ತೆ ಮನೆಗೆ ಪುನಃ ಹೋಗಿ ಜೀವನ ನಡೆಸಬೇಕಾಗುತ್ತದೆಂಬ ನಿರೀಕ್ಷೆಯಲ್ಲಿರುತ್ತಾಳೆ. ಆ ಸಂದರ್ಭದಲ್ಲಿ ಎಷ್ಟೇ ಕಷ್ಟವನ್ನನುಭವಿಸಿದರೂ ಅತ್ತೆ-ಮಾವ ಗಂಡ ಯಾರನ್ನೇ ಆಗಲಿ ಅಪರಾಧಿ ಸ್ಥಾನದಲ್ಲಿ ನಿಲ್ಲಿಸಲು ಆಕೆ ಇಷ್ಟಪಡುವುದಿಲ್ಲ. ಮತ್ತೊಂದು ಕಡೆ ಆಕೆಗೆ ಏನಾದರೂ ಮಕ್ಕಳಿದ್ದ ಪಕ್ಷದಲ್ಲಿ ಮುಂದೆ ಆ ಮಕ್ಕಳಿಗೆ ಅತ್ತೆ ಮನೆಯವರು ಕೊಲೆ ಬೆದರಿಕೆ ಹಾಕಿ ಕೆಲವರ ಬಾಯಿ ಮುಚ್ಚಿಸಲು ಪ್ರಯತ್ನ ಪಡುವ ಸಂದರ್ಭಗಳೂ ಇಲ್ಲದಿಲ್ಲ.

ಹೀಗಾಗಿ ವರದಕ್ಷಿಣೆಯ ಭೂತವು ಗ್ರಾಮ-ನಗರ, ಬಡವ, ಶ್ರೀಮಂತರೆನ್ನದೆ, ಅವಿದ್ಯಾವಂತ–ವಿದ್ಯಾವಂತರೆನ್ನದೆ ಎಲ್ಲರನ್ನೂ ಆವರಿಸಿದೆ. ಇಂದು 21ನೇ ಶತಮಾನಕ್ಕೆ ಕಾಲಿಡುತ್ತಿರುವ ಈ ಯುಗದಲ್ಲೂ ವರದಕ್ಷಿಣೆಯೆಂಬುದು ಧರ್ಮ, ಜಾತಿ, ಮತ, ಕುಲಗಳೆಂಬ ಬೇಧವಿಲ್ಲದೆ ಇಡೀ ಸಮಾಜವನ್ನೇ ಅಧೋಗತಿಗೆ ನೂಕುತ್ತಿದೆ.

ಅತ್ತೆ ಮನೆಯಲ್ಲಿ ಸೊಸೆಯ ಸ್ಥಾನಮಾನಗಳು ನಿರ್ಧಾರವಾಗುವುದು ಕೂಡ ಸೊಸೆ ತರುವ ವರದಕ್ಷಿಣೆಯ ಆಧಾರದ ಮೇಲೆಯೇ. ವರದಕ್ಷಿಣೆಯ ಮೊತ್ತ ಹೆಚ್ಚಿದಷ್ಟೂ, ಅತ್ತೆ-ಮಾವಂದಿರಿಗೆ ಹೆಚ್ಚು ಪ್ರೀತಿ ಪಾತ್ರಳಾಗುತ್ತಾಳೆ. ಇಲ್ಲದಿದ್ದಲ್ಲಿ ಅತ್ತೆಯ ಸೀಮೆಎಣ್ಣೆ, ಬೆಂಕಿಕಡ್ಡಿಯ ಪ್ರಕೋಪಕ್ಕೆ ಬಲಿಯಾಗಬೇಕಾಗುತ್ತದೆ. ಅದರಲ್ಲೂ ತಾಯಿಯ ಮಾತನ್ನು ಅಕ್ಷರಸಹ ಪಾಲಿಸುವ ಗಂಡನಾದರಂತೂ ಮುಗಿದೇ ಹೋಯಿತು, ದಿನನಿತ್ಯ ಹಿಂಸೆ ಕಟ್ಟಿಟ್ಟ ಬುತ್ತಿ, ತಿರುಗಿ ಹೇಳುವಂತಿಲ್ಲ. ಈವರೆಗೆ ನಡೆದ ಘಟನೆಗಳಲ್ಲಿ ಎಷ್ಟೋ ವಿದ್ಯಾವಂತ ಹೆಣ್ಣುಮಕ್ಕಳೂ ಕೂಡ ಇದರಿಂದ ಹೊರತಾಗಿಲ್ಲ.

ಇತ್ತೀಚೆಗೆ ಸರಳವಿವಾಹ, ಅಂತರ್ಜಾತಿ ವಿವಾಹ, ಪ್ರೇಮ ವಿವಾಹ, ಸಾಮೂಹಿಕ ವಿವಾಹಗಳೂ ನಿರಂತರವಾಗಿ ನಡೆಯುತ್ತಿದ್ದು, ಹಳ್ಳಿಯಿಂದ ದಿಲ್ಲಿಯವರೆಗೂ ಜನತೆಯಲ್ಲಿ ಹೊಸ ಆಲೋಚನೆಗಳು ಬೆಳೆದಿದ್ದರೂ ಸಹ ಇದರಿಂದ ಏನೂ ಪ್ರಯೋಜನವಾಗುತ್ತಿಲ್ಲ. ಹಾಗೆ ನೋಡಿದರೆ ಇತ್ತೀಚೆಗೆ ವಿದ್ಯಾವಂತರಲ್ಲೇ ಹೆಚ್ಚು ಹೆಚ್ಚು ವರದಕ್ಷಿಣೆಯ ಆಸೆ ಕಂಡುಬರುತ್ತಿದೆ. ಅಲ್ಲದೆ ಉನ್ನತ ಹುದ್ದೆಗಳಲ್ಲಿ ಅಧಿಕಾರ ನಿರ್ವಹಿಸುತ್ತಿರುವವರೂ ಕೂಡ ಇದರಿಂದ ಹೊರತಾಗಿಲ್ಲವೆಂದೇ ಹೇಳಬಹುದು. ಹೀಗೆ ಉನ್ನತ ಶಿಕ್ಷಣ–ಅಧಿಕಾರ (ಹುದ್ದೆ) ಇರುವಂತಹ ವರ ಕೆಲವು ಅಭಿಪ್ರಾಯಗಳನ್ನು ಕೇಳಿದಾಗ, "ನಾವು ಹೆಚ್ಚು ಹಣ ಖರ್ಚು ಮಾಡಿ ಸಾಲಮಾಡಿ ಶಿಕ್ಷಣ ಮುಗಿಸಿ ಬಂದಿರುತ್ತೇವೆ. ಆ ಸಾಲದ ಹಣ ತೀರಿಸುವುದು ಹೇಗೆ? ಆದ್ದರಿಂದ ಆ ಖರ್ಚನ್ನು ಸರಿದೂಗಿಸಲು ವರದಕ್ಷಿಣೆ ತೆಗೆದುಕೊಳ್ಳಬೇಕಾಗುತ್ತದೆಂಬ ಹಾರಿಕೆಯ ಉತ್ತರ ನೀಡುವುದು ವರಮಹಾಶಯರಲ್ಲಿ ಸರ್ವೇಸಾಮಾನ್ಯವಾಗಿದೆ.

ಮತ್ತೊಂದು ಕಡೆಯಲ್ಲಿ ನಾವು ವರದಕ್ಷಿಣೆ ತೆಗೆದುಕೊಳ್ಳದಿದ್ದರೆ, ವಧುವಿನ ತಂದೆ ತಾಯಿಗಳೇ ವರನ ಬಗ್ಗೆ ಸಂಶಯ ಪಡುತ್ತಾರೆ ಎಂಬಂತಹ ಹಲವಾರು ಸಮರ್ಥನೆ ಸಿದ್ಧವಾಗಿರುತ್ತವೆ. ಅಂತೂ ಏನೇ ಇರಲಿ ಇವರಿಬ್ಬರ ಮಧ್ಯೆ ವರದಕ್ಷಿಣೆಯ ಭೂತಕ್ಕೆ 'ಹೆಣ್ಣೇ' ಬಲಿಪಶುವಾಗುತ್ತಾಳೆ.

ಹೀಗೆ ದೇಶದಲ್ಲಿ ದಿನೇ ದಿನೇ ಹೆಚ್ಚುತ್ತಿರುವ ವರದಕ್ಷಿಣೆಯ ಸಾವುಗಳ ಸಂಖ್ಯೆಯು ಲೋಕ ಸಭೆಯಲ್ಲಿ ಮಂಡಿಸಲಾದ ಒಂದು ವರದಿಯ ಪ್ರಕಾರ

| | | ಬೆಂಕಿಯಲ್ಲಿ ಸಾಯಿಸಿದ ಸಂಖ್ಯೆ |
|---|---|---|
| 1986 | 1,319 | 451 |
| 1987 | 1.811 | 792 |
| 1988 | 2,152 | 922 |
| 1989 | 3,829 | |
| 1993 | 4,996 | |

ಎಂಬುದಾಗಿ ತಿಳಿದುಬರುತ್ತದೆ. ಅತ್ಯಂತ ಹೆಚ್ಚಿನ ವರದಕ್ಷಿಣೆಯ ಸಾವುಗಳ ಸಂಖ್ಯೆ ಉತ್ತರ ಪ್ರದೇಶದಲ್ಲಿ ಎಂಬುದಾಗಿ ಕಂಡುಬರುತ್ತದೆ.

ಹೀಗೆ ಪ್ರತಿಯೊಂದು ಪ್ರಕರಣಗಳೂ ಖಚಿತವಾಗಿ ದಾಖಲಾಗುತ್ತಿವೆ ಎಂದು ಹೇಳುವಂತಿಲ್ಲ. ಎಷ್ಟೋ ಪ್ರಕರಣಗಳು ಹಣದಿಂದಲೋ,ಸರಿಯಾದ ಸಾಕ್ಷಿ ಆಧಾರ ದೊರೆಯದೆಯೋ ಮುಚ್ಚಿ ಹಾಕುವ ಸಂದರ್ಭಗಳೂ ಇಲ್ಲದಿಲ್ಲ. ಏಕೆಂದರೆ ವಧುವಿನ ತಂದೆ ತಾಯಿಗಳು ಬಡತನದಲ್ಲಿದ್ದರಂತೂ ಅವರ ಪರಿಸ್ಥಿತಿ ಹೇಳತೀರದು. ಇತ್ತ ಮಗಳನ್ನು ಕಳೆದುಕೊಳ್ಳುವುದರ ಜೊತೆಗೆ, ಅತ್ತ ಕೋರ್ಟು ಕಛೇರಿಯೆಂದು ವರ್ಷಾನುಗಟ್ಟಲೆ ಅಲೆಯುವಂತಹ ಸಂಕಟ ಮತ್ತೊಂದು ಕಡೆ. ಇಷ್ಟೆಲ್ಲಾ ಶ್ರಮಪಟ್ಟರೂ ಇದುವರೆಗೆ ತೀರ್ಮಾನವಾದ ಪ್ರಕರಣಗಳಲ್ಲಿ ಎಷ್ಟು ಮಂದಿಗೆ ನ್ಯಾಯ ದೊರಕಿದೆ? ಎಂಬುದು ಮತ್ತೊಂದು ಪ್ರಶ್ನೆಯಾಗಿ ಉಳಿಯುತ್ತದೆ. ಹಾಗೆ ನೋಡಿದರೆ ಗಂಡನಿಗೆ ಶಿಕ್ಷೆ ಅಥವಾ ದಂಡ ಆಗಿರುವುದು ನೂರಕ್ಕೆ ಒಂದೋ, ಎರಡೋ ಆದರೆ

ಸತ್ತ ಮಗಳು ವಾಪಸ್ಸು ಬರುವುದಿಲ್ಲವೆಂದು ಎಷ್ಟೋ ತಂದೆ ತಾಯಿಯರು ಕೋರ್ಟು ಕಛೇರಿಗಳಿಗೆ ಹೋಗಲು ಹಿಂಜರಿಯುತ್ತಾರೆ. ಅದರಲ್ಲೂ ಮನೆಯಲ್ಲಿ ಮದುವೆಯಾಗುವ ಹೆಣ್ಣು ಮಕ್ಕಳಿದ್ದರಂತೂ ಅಂತಹ ತಂದೆ ತಾಯಿಗಳೂ ಸತ್ಯವನ್ನು ಹೇಳುವುದಕ್ಕಾಗಲಿ, ಕೋರ್ಟಿಗೆ ಪ್ರಕರಣಗಳನ್ನು ದಾಖಲಿಸುವುದಕ್ಕಾಗಲಿ ತುಂಬಾ ಹಿಂಜರಿಯುವುದರಿಂದ, ಈ ವರದಕ್ಷಿಣೆ ಪಿಡುಗಿಗೆ ಇನ್ನು ಹೆಚ್ಚಿನ ಪ್ರೋತ್ಸಾಹ ಕೊಟ್ಟಂತೆ ಆಗುತ್ತದೆ.

ಹೀಗೆ ಮಾಹಿತಿಯ ಕೊರತೆಯಿಂದಾಗಿ ಕೋರ್ಟಿನಲ್ಲೂ ಕೂಡ ಎಷ್ಟೋ ಪ್ರಕರಣಗಳು ಮುಚ್ಚಿ ಹಾಕಲ್ಪಡುತ್ತವೆ. ಈ ಎಲ್ಲಾ ಕಾರಣಗಳಿಂದ ವರದಕ್ಷಿಣೆಯು ವಿಷಾನಿಲದಂತೆ ದಿನೇ ದಿನೇ ಇಡೀ ಸಮಾಜದ ಎಲ್ಲಾ ವರ್ಗಕ್ಕೂ ಹಬ್ಬಿಬಿಟ್ಟಿದೆ.

ಈ ಒಂದು ದಿಶೆಯಲ್ಲಿ ವರದಕ್ಷಿಣೆಯನ್ನು ಹೋಗಲಾಡಿಸುವಲ್ಲಿ ಯುವ ಜನತೆಯು, ಸರ್ಕಾರದ ಕಾನೂನಿನ ಹಾಗೂ ಸ್ವಯಂ ಸೇವಕರು, ಸಂಘ ಸಂಸ್ಥೆಗಳ ಪಾತ್ರ ಬಹಳ ಮಹತ್ವದ್ದಾಗಿದೆ. ಈವರೆಗೆ ಮಹಿಳೆಯರ ಪರವಾದ ಕಾನೂನುಗಳು ಇದ್ದಾಗ್ಯೂ ಕೂಡ, ಈ ಕಾನೂನಿನ ಅರಿವು ಹೆಚ್ಚಿನ ಮಹಿಳೆಯರಿಗೆ ಇಲ್ಲವಾಗಿದೆ. ಅದರಲ್ಲೂ ಗ್ರಾಮೀಣ ಮಹಿಳೆಯರಿಗಂತೂ ಇದು ದೂರವೇ ಉಳಿದುಬಿಟ್ಟಿದೆ. ಅಂತಹ ಮಹಿಳೆಯರಿಗೆ ಕಾನೂನಿನ ಅರಿವಿನ ಜೊತೆಗೆ ತಾವು ಸಂಘಟಿಸಿ ಒಗ್ಗಟ್ಟಿನಿಂದ ಹೋರಾಟ ನಡೆಸಿದಾಗ ಮಾತ್ರ ಸಮಾಜಕ್ಕೆ ಅಂಟಿದ ಇಂತಹ ಪಿಡುಗುಗಳನ್ನು ಬುಡಸಮೇತವಾಗಿ ಕಿತ್ತು ಹಾಕುವುದು ಸಾಧ್ಯವಾಗುತ್ತದೆ. ಇಲ್ಲವಾದಲ್ಲಿ ಮನುಷ್ಯ ಮನುಷ್ಯರ ನಡುವೆ ಮಾನವೀಯತೆಯ ಕೊರತೆಯುಂಟಾಗಿ ಗಂಡು ಹೆಣ್ಣಿನ ನಡುವಿನ ಪ್ರೀತ್ಯಾಧಾರಿತ ಸಂಬಂಧಗಳು ಸಂಶಯಕ್ಕೆಡೆಯಾಗುತ್ತದೆ. ಅತ್ತೆ–ಮಾವ, ಬಂಧು - ಬಳಗದವರ ಜೊತೆಗಿರುವ ಸಂಬಂಧಗಳು ಕ್ರಮೇಣ ಕಳಚುತ್ತಾ ಹೋದಂತೆ ಸಮಾಜದಲ್ಲಿ ಮಹಿಳೆಯರ ಸ್ಥಾನಮಾನಗಳೂ ಕೂಡ ಅಧೋಗತಿಗೆ ಇಳಿದು, ಸಮಾಜದ ಉನ್ನತಿಗೆ ಮಾರಕವಾಗುತ್ತದೆ. ●

---

# ಸದ್ದಿಲ್ಲದ ಸಮರ

ಕಲ್ಲು ಮಣ್ಣು ಹರಳನ್ನು
ಮಾಣಿಕ್ಯವೆಂದಾಯಲಿಲ್ಲ
ಕೋಗಿಲೆಯ ಗಾನ ದುಂಬಿಯ ಝೇಂಕಾರ
ಕೇಳಲಿಲ್ಲ
ಕುಣಿದು ಕುಪ್ಪಳಿಸುವ ಮೊದಲೆ
ಬಿದ್ದು ಚಾಟಿ ಏಟು
ಚುಕ್ಕಾಣಿ ಹಿಡಿದಿದ್ದಳು ಈಕೆ
ನಡೆಸಲು ಸಂಸಾರ ನೌಕೆ

ಕುದುರೆ ಹತ್ತಲಿಲ್ಲ
ಕತ್ತಿ ಝಳಪಿಸಲಿಲ್ಲ
ಶತ್ರುಗಳನರಸುತ್ತ ರಣರಂಗಕ್ಕೆ ಹೋಗಲಿಲ್ಲ
ಇದ್ದಲ್ಲಿಗೆ ಬಂದಿದ್ದರು
ಹಲ್ಲು ಮಸೆಯುತ್ತ
ಬಡತನ, ರೋಗ, ಹಸಿವು.

ಸಾಲು ಸಾಲು ಬಸಿರು
ಜೊತೆಗೂಡಿತ್ತು ಅಪವಾದ ಆಭಾಸಗಳ
ಮಸಲತ್ತು
ಧರ್ಮ ಅರ್ಥ ಕಾಮಗಳಲ್ಲಿ
ನಾತಿಚರಾಮಿ ಎಂದವ
ವಿಶ್ವಾಮಿತ್ರನಂತಾದ
ಮರಳಿ ಬಂದವನಿಗೆ
ಮೆರವಣಿಗೆ, ಮಾನಸನ್ಮಾನಗಳ
ಹಾರತುರಾಯಿಗಳ ರಾಶಿ
ಸಂದಿತ್ತು ಸ್ವಾತಂತ್ರ್ಯ ಯೋಧನಿಗೆ ಹಾರೈಸಿ
ಹಿಡಿಕೂಳಿಗಾಗಿ, ಗೋಳಿಡುವ ಕಂದರಿಗಾಗಿ
ಸದ್ದಿಲ್ಲದೆ ನಡೆಸಿದ್ದ ಹೋರಾಟಕ್ಕೆ
ಯಾರಿಂದ ಸಂದೀತು ಬಹುಮಾನ ?

● ಎಂ. ಎಚ್. ಲಕ್ಷ್ಮೀನರಸಮ್ಮ

# ವಿದ್ಯಾವಂತ ಮಹಿಳೆಯರು ಎತ್ತ ಸಾಗಿದ್ದಾರೆ!

'ಓದು ಕಲಿತ ನಾರಿ ಸುಖ ಸಂಸಾರಕ್ಕೆ ದಾರಿ' ಎಂಬ ಭಿತ್ತಿ ಚಿತ್ರಗಳು ಸಾಕ್ಷರತಾ ಆಂದೋಲನದ ಹಿನ್ನಲೆಯಲ್ಲಿ ಎಲ್ಲೆಲ್ಲಿಯೂ ರಾರಾಜಿಸುತ್ತಿರುವುದನ್ನು ನಾವಿಂದು ಗಮನಿಸುತ್ತಿದ್ದೇವಲ್ಲವೇ! ಪ್ರತಿದಿನವೂ ವರದಕ್ಷಿಣೆ ಸಾವು, ಕೊಲೆ, ಅತ್ಯಾಚಾರ ಇತ್ಯಾದಿ ಸುದ್ದಿಯನ್ನು ಪತ್ರಿಕೆಯಲ್ಲಿ ಓದುತ್ತಿದ್ದೇವೆ. ಈ ಘಟನೆಗಳಿಗೆ ವಿದ್ಯಾವಂತರೇ ಬಲಿಯಾಗುತ್ತಿದ್ದಾರಲ್ಲಾ! ಸುಖ ಸಂಸಾರ ಕಟ್ಟುವ ಅವಕಾಶ ಮಹಿಳೆಯರಿಗಿಲ್ಲವೇ? ಎಲ್ಲವೂ ಪುರುಷನಿಂದಲೇ ನಿರ್ಧರಿಸಲ್ಪಡಬೇಕೆ?

ನೌಕರಿಯಲ್ಲಿರುವ ಮಹಿಳೆಯರು ತಮ್ಮದೇ ಆದ ಭವಿಷ್ಯದ ಯೋಜನೆಗಳನ್ನು ಹೊಂದಿರುವುದು ಸರ್ವೇ ಸಾಮಾನ್ಯ. ಇದಕ್ಕೆ ತಕ್ಕ ಬೆಂಬಲ ಮನೆಯವರಿಂದ ದೊರೆಯುತ್ತಿದೆಯೇ? ಹಾಗಿದ್ದಲ್ಲಿ ಮಹಿಳೆಯರಿಗೆ ಸಮಸ್ಯೆಗಳೇ ಇರುತ್ತಿರಲಿಲ್ಲ. ಮಹಿಳೆಯರು ನಾನಾ ರೀತಿಯಲ್ಲಿ ಎದುರಿಸುತ್ತಿರುವ ಸಮಸ್ಯೆಗಳನ್ನು ಅದನ್ನು ತಾವೇ ಪರಿಹರಿಸಿಕೊಳ್ಳುತ್ತಿರುವ ಬಗೆಯನ್ನು ಯಥಾವತ್ತಾಗಿ ಚಿತ್ರಿಸಲು ಯತ್ನಿಸಲಾಗಿದೆ.

ಮಹಿಳೆ ಮನೆಯಿಂದ ಹೊರಡಬೇಕಾದರೆ ಜೊತೆ ಮಾಡಿ ಕಳುಹಿಸುವ ಪರಿಪಾಠ ನಮ್ಮಲ್ಲಿದೆ. ಇದಕ್ಕೆ ವ್ಯತಿರಿಕ್ತವಾಗಿ ಮಹಿಳೆಯರು ನಿರ್ಭೀತಿಯಿಂದ ಹೊರಗಿನವರೊಡನೆ ವ್ಯವಹರಿಸುತ್ತರುವುದನ್ನು ನಾವಿಂದು ವೀಕ್ಷಿಸುತ್ತಿದ್ದೇವಲ್ಲವೇ? ಕೇಂದ್ರ ಕಚೇರಿಯೊಂದರಲ್ಲಿ ನೌಕರಿ ಮಾಡುತ್ತಿದ್ದ ಮೀನಾ ಮನೆಯವರಿಂದ ದೂರವಿದ್ದು ಬಾಡಿಗೆ ಕೊಠಡಿಯೊಂದರಲ್ಲಿ ವಾಸಿಸುತ್ತಿದ್ದರು. ಹೊಸ ರೀತಿಯಲ್ಲಿ ಬದುಕಬೇಕೆಂಬ ಧೋರಣೆ ಅವರದಾಗಿತ್ತು. ಒಮ್ಮೆ ತನಿಖೆಗೆ ಬಂದ ಮೇಲಾಧಿಕಾರಿಯ ಪರಿಚಯ ಸ್ನೇಹಕ್ಕೆ ತಿರುಗಿ ವಿವಾಹದಲ್ಲಿ ಪರ್ಯಾವಸಾನವಾಗುವುದಿತ್ತು. ಅಧಿಕಾರಿಯು ವಿದೇಶದಲ್ಲಿದ್ದುದರಿಂದ ಅದಕ್ಕೆ ತಕ್ಕ ವ್ಯವಸ್ಥೆ ಮಾಡಿ ಮೀನಾರನ್ನು ಅಲ್ಲಿಗೆ ಆಹ್ವಾನಿಸಿದ. ಆದರೆ ವಿದೇಶಕ್ಕೆ ಕಾಲಿಟ್ಟ ಮೀನಾರನ್ನು ಸ್ವಾಗತಿಸಲು ಅಧಿಕಾರಿ ಬರಲಿಲ್ಲ. ಇದನ್ನು ಲೆಕ್ಕಿಸದೆ, ವಿಳಾಸವಿದ್ದುದರಿಂದ ಮನೆ ಪತ್ತೆ ಮಾಡಿ ಆತನನ್ನು ಭೇಟಿ ಮಾಡಿದಾಗ ಆತನ ಪ್ರತಿಕ್ರಿಯೆ ಭಿನ್ನವಾಗಿತ್ತು. ಆತ ಮೀನಾರನ್ನು ವಿವಾಹವಾಗಲು ನಿರಾಕರಿಸಿದ. ಈ ಸಂದರ್ಭದಲ್ಲಿ ಸಾಮಾನ್ಯ ಸ್ತ್ರೀಯೋರ್ವಳ ಸ್ಥಿತಿ ಹೇಗಿದ್ದಿರಬಹುದು! ಮನೆಯವರ ವಿರೋಧವಿದ್ದಾಗ್ಯೂ ಈ ಸಾಹಸಕ್ಕೆ ಕೈಹಾಕಿದ ಮೀನಾರ ಮನೋಸ್ಥಿತಿಯಲ್ಲಿ ಊಹಿಸೋಣ. ಆದರೆ ಆಕೆಯ ಆತ್ಮಸ್ಥೈರ್ಯ ಜೀವನವನ್ನೆದುರಿಸಲು ಬೆಂಬಲ ನೀಡಿದೆ. ಆಕೆ ತನ್ನೂರಿನವರ ಪರಿಚಯದಿಂದಾಗಿ ಅವರ ಮನೆಯಲ್ಲೇ ಅತಿಥಿಯಾಗಿದ್ದು, ಜೀವನೋಪಾಯಕ್ಕಾಗಿ ನೌಕರಿ ಹಿಡಿದು ವಿದೇಶದಲ್ಲೇ ಜೀವನ ಸಾಗಿಸುತ್ತಿದ್ದಾರೆ. ಆಕೆಯ ಬದುಕುವ ಛಲ ಮೆಚ್ಚತಕ್ಕದ್ದು. ಯಾರಾದರೂ ಒಂದು ಮಾತು ಹೇಳಿದರೆ ಕಣ್ಣಲ್ಲಿ ನೀರು ತಂದುಕೊಳ್ಳುತ್ತಿದ್ದ ಹೆಣ್ಣುಮಕ್ಕಳು ಇಂದು ಆ ಸ್ಥಿತಿಯಿಂದ ಹೊರಬರುತ್ತಿದ್ದಾರೆಂದರೆ ಅತಿಶಯೋಕ್ತಿ ಎನಿಸಲಾರದು.

ವಿದ್ಯಾವಂತ ಮಹಿಳೆಯರು ಆರ್ಥಿಕವಾಗಿ ಸ್ವತಂತ್ರರಾಗಿದ್ದಲ್ಲಿ ಎಂತಹ ಪರಿಸ್ಥಿತಿಯನ್ನು ಎದುರಿಸಲು ಸಿದ್ಧರಿರುತ್ತಾರೆ. ಇಲ್ಲದಿದ್ದಲ್ಲಿ ತಮ್ಮ ಸ್ವಂತಿಕೆ, ಧ್ಯೇಯ ಇತ್ಯಾದಿಗಳನ್ನು ಮರೆತು ಪರಿಸರಕ್ಕೆ ಒಗ್ಗಿಕೊಳ್ಳುತ್ತಾರೆ. ಇತ್ತೀಚೆಗೆ ನಡೆದ ಘಟನೆಯೊಂದು ಹೀಗಿದೆ: ಸನ್ನಿವೇಶದ ಒತ್ತಡಕ್ಕೆ ಮಣಿದು ಉತ್ತಮ ಉದ್ಯೋಗದಲ್ಲಿರುವ ವಿಜಯ ವಿವಾಹ ಬಂಧನಕ್ಕೆ ಸಿಲುಕಿದರು. ಅವರ ಸಂಗಾತಿ ದೀರ್ಘಕಾಲ ನಿರುದ್ಯೋಗಿಯಾಗಿದ್ದು ನಿಷ್ಕ್ರಿಯನಾಗಿದ್ದ. ಇತ್ತೀಚೆಗೆ ಸಣ್ಣ ಸ್ವಂತ ಉದ್ಯೋಗದಲ್ಲಿ ನಿರತನಾಗಿದ್ದನಷ್ಟೆ. (ಇದರ ಬಗ್ಗೆ ವಿಶೇಷ ಮಾಹಿತಿ ಮೊದಲೇ ನೀಡಿರಲಿಲ್ಲ) ವಿದ್ಯೆಗೆ ತಕ್ಕ ವೃತ್ತಿಯಲ್ಲದ್ದರಿಂದ ಅತೃಪ್ತಿಯಿಂದಿದ್ದ ಕಾರಣ ವೃತ್ತಿ ಗೌರವದ ಬಗ್ಗೆ ತಿಳಿಯದವನಾಗಿದ್ದ. ಮಿಗಿಲಾಗಿ ರೂಢಿಯಲ್ಲಿರುವಂತೆ ತನ್ನ ವಿಚಾರವನ್ನು ಮೊದಲೇ ತಿಳಿಸುವ ಪ್ರಯತ್ನವನ್ನು ಮಾಡಲಿಲ್ಲ. ಹೀಗಾಗಿ ಹಿರಿಯರೇ ಎಲ್ಲಾ ವಿಚಾರದಲ್ಲೂ ವ್ಯವಹರಿಸಿದ್ದನ್ನು ಪ್ರಾರಂಭದಿಂದಲೇ ಕಂಡ ವಿಜಯ, ಈತನ ಬಗ್ಗೆ ಬಹಳ ಸೂಕ್ಷ್ಮವಾಗಿ ಗಮನಿಸುತ್ತಿದ್ದರು. ನೆಂಟರಿಷ್ಟರ ಅಭಿಪ್ರಾಯದಿಂದಾಗಿ ಕ್ರಮೇಣ ವಿಜಯ ತಮ್ಮ ಸಂಗಾತಿಯ ಬಗ್ಗೆ ಸ್ಪಷ್ಟ ಚಿತ್ರ ಪಡೆಯುವಂತಾದರು ಆತನನ್ನು ತಾತ್ಸಾರದಿಂದ ಕಾಣುವುದನ್ನು ಸ್ವತಃ ವೀಕ್ಷಿಸಿದರು. ಆತನ ನಡುವಳಿಕೆಯಲ್ಲಿನ ಲೋಪದೋಷಗಳನ್ನು ಪತ್ತೆ ಹಚ್ಚಿದರು. ಹೀಗಿರಲು ಒಮ್ಮೆ

ಆತನ ತಂದೆಯೇ ವಿಜಯ ಅವರನ್ನು ವೈಯಕ್ತಿಕ ಬದುಕಿಗೆ ಸಂಬಂಧಿಸಿದಂತೆ ಪ್ರಶ್ನಿಸತೊಡಗಿದಾಗ ಸಂಗಾತಿಯ ಮಂಕುತನ, ನಿರುತ್ಸಾಹ ಇತ್ಯಾದಿಯ ಬಗ್ಗೆ ಸ್ಥೂಲವಾಗಿ ತಮ್ಮ ಅನಿಸಿಕೆಯನ್ನು ಬಹಿರಂಗ ಪಡಿಸಿದುದೇ ತಡ ಮನೆಯ ವಾತಾವರಣವೇ ಬದಲಾಯಿತು. ಆತನಲ್ಲಿ ಗೆಲುವನ್ನುಂಟುಮಾಡಲು ಪರಿಸರ ಬದಲಾವಣೆಯ ಅಗತ್ಯವನ್ನರಿತ ವಿಜಯ ಸಧ್ಯ ತಾನು ತವರುಮನೆಯಲ್ಲಿರುವುದಾಗಿ ತಿಳಿಸಿದಾಗ, ಅದಕ್ಕೆ ಬಂದ ಪ್ರತಿಕ್ರಿಯೆ ಅವರಿಗೆ ವಿಸ್ಮಯವನ್ನುಂಟುಮಾಡಿತು. ಆತ ವಿಜಯರನ್ನು ನೋಡಲು ತವರಿಗೆ ಹೋಗುವ ಮನಸ್ಥಿತಿಯಲ್ಲಿರಲಿಲ್ಲ. ಬದಲಿಗೆ ತಂದೆಯ ಆದೇಶದಂತೆ ನಿರ್ಧಾರದಂತೆ ಕೇವಲ ಮೂರು ತಿಂಗಳ ಅವಧಿಯ ವೈವಾಹಿಕ ಜೀವನವನ್ನು ಮುಕ್ತಾಯಗೊಳಿಸುವ ಹಂತಕ್ಕೆ ತಲುಪಿದ್ದನೆಂದರೆ ಆತ ವಿವೇಕಿಯೇ ? ಸ್ವಂತ ಬುದ್ಧಿಯುಳ್ಳವನೇ ? ಅಥವಾ ನಿಜವಾಗಿಯೂ ಮಂಕೇ? ಎಂಬ ಸಂದೇಹ ಕಾಡುತ್ತದಲ್ಲವೇ ? ಹೀಗಿದೆ ಕುಟುಂಬ ವ್ಯವಸ್ಥೆ. ಪುರುಷನ ದೌರ್ಬಲ್ಯವನ್ನು ಸ್ತ್ರೀ ಎತ್ತಿ ತೋರಿಸುವಂತಿಲ್ಲ. ಸುಶಿಕ್ಷಿತ ಮಹಿಳೆ ತನ್ನ ಸಂಗಾತಿಯ ಮಾನಸಿಕ ಸ್ಥಿತಿಯನ್ನು ಸುಧಾರಿಸಲು ಹೊರಟ ಫಲವೇ ವಿವಾಹ ವಿಚ್ಛೇದನಕ್ಕೆ ಸಲಹೆಯಾಗಿದೆ ಎಂದರೆ ನಂಬಲಾದೀತೆ ? ಈ ಘಟನೆಯ ಬಗ್ಗೆ ಚಿಂತಿಸದೆ ತಮ್ಮ ಎಲ್ಲಾ ಚಟುವಟಿಕೆಗಳನ್ನು ವಿಜಯ ಎಂದಿನಂತೆ ನಿರ್ವಹಿಸುತ್ತಿದ್ದಾರೆ. ಆದರೆ ಆತ ಹತಾಶನಾಗಿ ಕೆಲವು ಕಾಲ ತನ್ನ ದೈನಂದಿನ ಚಟುವಟಿಕೆಗಳನ್ನು ಸ್ಥಗಿತಗೊಳಿಸಿದ್ದನೆಂದರೆ ಅಚ್ಚರಿಯೇ ಸರಿ ! ಇದರಿಂದ ಆತನ ಮಾನಸಿಕ ದೌರ್ಬಲ್ಯ ಖಚಿತವಾಗುತ್ತದಲ್ಲವೇ ?

ಇನ್ನು ಋತುಚಕ್ರದ ಬಗ್ಗೆ ವಿದ್ಯಾವಂತರಲ್ಲಿ ಸ್ಪಷ್ಟ ಕಲ್ಪನೆ ಇದೆ. ಆದರೆ ಪ್ರಚಲಿತದಲ್ಲಿರುವ ಪದ್ಧತಿಯ ಬಗ್ಗೆ ಪ್ರತಿಭಟಿಸುವ ಶಕ್ತಿ ಇಲ್ಲ. ಕೆಲವರಲ್ಲಿ ಹಿಂದಿನವರು ವಿಶ್ರಾಂತಿಗಾಗಿ ಮಾಡಿದ್ದು ಎಂಬ ನಂಬಿಕೆ ಬಲವಾಗಿ ಬೇರೂರಿದೆ. ಅದನ್ನು ಪಾಲಿಸುವುದೇ ಸರಿ ಎಂಬ ನಿಲುವು ಎದ್ದು ಕಾಣುತ್ತದೆ. ಮೂರುದಿನಗಳ ಕಾಲ ದೂರ ಕುಳಿತುಕೊಳ್ಳುವುದನ್ನು ವಿರೋಧಿಸಿ, ಆಚರಿಸುವ ಗುಂಪಿನವರಿಗೆ ಮಾನಸಿಕ ಹಿಂಸೆ ತಪ್ಪಿದ್ದಲ್ಲ. ಇಂದು ಎಷ್ಟೋ ಮನೆಗಳಲ್ಲಿ ಈ ಪದ್ಧತಿಯಲ್ಲಿ ಮಾರ್ಪಾಟುಗಳಾಗಿದ್ದರೂ ಅಸ್ಪೃಶ್ಯರಂತೆ ಕಾಣುವ ಮನೋಭಾವ ಬದಲಾಗಿಲ್ಲ. ಸ್ವತಃ ವೈದ್ಯೆಯರು, ದಾದಿಯರು ಈ ಸಮಸ್ಯೆಯನ್ನು ಎದುರಿಸ ಬೇಕೆಂದರೆ ವಿದ್ಯಾವಂತರ ಸ್ಥಿತಿ ಚಿಂತಾಜನಕವಷ್ಟೆ. ಸ್ತ್ರೀಯನ್ನು ಆ ಮೂರು ದಿನಗಳಲ್ಲೂ ಎಂದಿನಂತೆ ಕಾಣುವ ಮನೆಗಳಲ್ಲಿ ಸ್ತ್ರೀ ಗೆಲುವಾಗಿರುವುದನ್ನು ಗಮನಿಸಬಹುದು. ಕಾರಣ, ತಾವು ಯಾವ ಸ್ಥಿತಿಯಲ್ಲಿದ್ದೇವೆಂಬುದು ಬಹಿರಂಗ ಪಡುವುದಿಲ್ಲವಲ್ಲಾ ! ಎಂಬ ವಿಶ್ವಾಸವೇ ಅವರಲ್ಲಿ ಕೀಳರಿಮೆಯನ್ನು ಹೋಗಲಾಡಿಸಿರುತ್ತದೆ. ಇದನ್ನು ಅರ್ಥಮಾಡಿಕೊಳ್ಳುವರೆಷ್ಟು ಮಂದಿ !

ಪ್ರತಿಷ್ಠಿತ ಸ್ಥಾನಮಾನ ಗಳಿಸಿ. ಸಾಮಾಜಿಕವಾಗಿ ಗುರುತಿಸಲ್ಪಟ್ಟಿರುವ ಮಹಿಳೆಯರು ಮೇಲೆಉಲ್ಲೇಖಿಸಿದ ರೀತಿಯಲ್ಲಿ ಹಿಂಸೆಗೊಳಗಾಗುವುದು ಒಂದೆಡೆಯಾದರೆ, ಮತ್ತೊಂದು ರೀತಿಯ ಮಾನಸಿಕ ಹಿಂಸೆ ಹೀಗಿದೆ! ಒಮ್ಮೆ ನಳಿನಿ ತನ್ನ ತಿಂಡಿಯ ಡಬ್ಬಿ ತೆಗೆದುಕೊಂಡು, ಚಮಚ ಸ್ಟ್ಯಾಂಡ್ ಮುಟ್ಟಿದುದೇ ತಡ, ಆಕೆಯ ಅತ್ತೆ, "ಛಿ ! ಮುಟ್ಟಿಬಿಟ್ಟೆಯಾ. ಎಲ್ಲಾ ಮೈಲಿಗೆಯಾಯಿತು. ಎಲ್ಲವನ್ನೂ ತೊಳೆಯಬೇಕು," ಎಂದು ಗದರಿದರು. ಅದಕ್ಕೆ ನಳಿನಿಯ ಪ್ರತಿಕ್ರಿಯೆ "ಹೋಗಲಿ ಬಿಡಿ, ಏನಾಗಿ ಹೋಯ್ತು" ಎಂಬುದಾಗಿತ್ತು. ಇದೇ ಪರಿಪಾಠ ಮುಂದುವರೆದುದರ ಪರಿಣಾಮವಾಗಿ ಆಕೆ 'ಅಹಂಕಾರಿ' ಎಂಬ ಬಿರುದು ಪಡೆದರು. ಅತ್ತೆಗೆ ಗೌರವ ಕೊಡುವುದಿಲ್ಲ ಎಂಬ ಆಪಾದನೆಗೂ ಒಳಗಾದರು. ಮಡಿ ಮೈಲಿಗೆಯ ಹಿನ್ನೆಲೆಯಲ್ಲಿ ದಿನಂಪ್ರತಿ ಸಂಪ್ರದಾಯಸ್ಥರ ಮನೆಗಳಲ್ಲಿ ಮಹಿಳೆಯರಿಗೆ ಹಿಂಸೆ ಇದ್ದೇ ಇದೆ. ಶುಚಿತ್ವ, ನೈರ್ಮಲ್ಯಕ್ಕಿಂತ ಮೈಲಿಗೆಯಾಯಿತೆಂದು 'ಗೊಣಗುವವರು ಮಲ ಮೂತ್ರ ವಿಸರ್ಜಿಸಿದಲ್ಲಿ ಚೊಕ್ಕವಾಗಿ ನೀರನ್ನು ಹಾಕಿ ಮತ್ತೊಬ್ಬರಿಗೆ ಹೇಸಿಗೆಯಾಗದಂತೆ ನೋಡಿಕೊಳ್ಳಬೇಕೆಂಬ ನಿಯಮ ಹೊಂದಿರುವುದಿಲ್ಲ. ಇದರ ಬಗ್ಗೆ ತಿಳಿಹೇಳಲು ಯತ್ನಿಸಿದಲ್ಲಿ 'ಬಂದ ಸೊಸೆ ಜೋರು, ಹೆಣ್ಣು ಮಕ್ಕಳು ಬಾಯಿ ಮಾಡಬಾರದು' ಎಂದು ನಾಲ್ಕು ಜನರಿಗೆ ಕೇಳುವಂತೆ ನೆರೆಹೊರೆಯವರೊಡನೆ ತಮ್ಮ ಅಳಲನ್ನು ತೋಡಿಕೊಳ್ಳುವ ಮಡಿ ಮಾಡುವವರ ಹಾವಳಿಯಿಂದ ಬಿಡುಗಡೆಯಾಗುವುದು ಎಂದು ? ಹೋಟೆಲ್‌ನಲ್ಲಿ ಯಾರೋ ಬೇಯಿಸಿದ್ದನ್ನು, ಬಡಿಸಿದ್ದನ್ನು ತಿನ್ನಲು ಉತ್ಸುಕರಾಗಿರುವ ಮಡಿವಂತರನ್ನು ಏನೆಂದು ಸಂಭೋದಿಸೋಣ ?

ಮಧ್ಯಮ ವರ್ಗದ ಸಂಪ್ರದಾಯಸ್ಥರ ಮನೆಯವರಾದ ಗೀತಾ ಹತ್ತು ವರ್ಷಗಳ ಕಾಲ ಸಂಸಾರ ನಡೆಸಿ

ಪುರುಷರ ಬಿಗಿ ಮುಷ್ಟಿಯಿಂದ ,ಹೊರಬರಲು ಯತ್ನಿಸಿದರು. ಮೂರು ಕಾಸಾದರೂ ತಾವು ಸಂಪಾದಿಸಿದರೆ, ತನ್ನ ವಿದ್ಯೆ ಸಾರ್ಥಕ ಎಂಬ ಹಂಬಲದಿಂದ ಮನೆಯ ಸಮೀಪವೇ ಇರುವ ಶಾಲೆಯೊಂದರಲ್ಲಿ ಅಧ್ಯಾಪಕಿಯಾಗಿ ಕೆಲಸ ಮಾಡುತ್ತಿದ್ದಾರೆ. ಹೀಗೆ ಎಷ್ಟೋ ಮಂದಿ ಸಂಸಾರ ಸುಖ ಅನುಭವಿಸಿ, ಮಾನಸಿಕವಾಗಿ ಸಾಕಷ್ಟು ಬೆಳೆದ ನಂತರ ತಮ್ಮ ಕಾಲ ಮೇಲೆ ತಾವು ನಿಲ್ಲಬೇಕೆಂಬ ಮನೋಭಾವ ಬೆಳೆಸಿಕೊಳ್ಳುತ್ತಿದ್ದಾರೆ.

ಮಹಿಳೆಯರು ಸಮಾಜ ಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವ ಪರಿ ಇಂದು ಹೊಸತೇನಲ್ಲ. ಸಂಪಾದಿಸುವುದು ಕೇವಲ ಗಂಡ, ಮಕ್ಕಳನ್ನು ಸಾಕಲು ಎಂಬ ಧೋರಣೆಯಲ್ಲಿ ಬದಲಾವಣೆಯಾಗುತ್ತದೆ. ಹೊರ ಪ್ರಪಂಚದೊಡನೆ ಸಂಪರ್ಕ ಹೆಚ್ಚುತ್ತಿರುವುದರಿಂದ ಕೇವಲ ಕುಟುಂಬದ ಮಿತಿಯೊಳಗೆ ಬದುಕಲು ಸ್ತ್ರೀ ಇಚ್ಛಿಸುತ್ತಿಲ್ಲ. ತನ್ನ ಅಸ್ತಿತ್ವವನ್ನು ಕುಟುಂಬದಿಂದ ಹೊರಗೆ ಸಾಬೀತು ಪಡಿಸಲು ಹೆಚ್ಚು ಉತ್ಸುಕಳಾಗಿದ್ದಾಳೆ. ಎಲ್ಲಿ ತನಗೆ ವ್ಯಕ್ತಿ ಗೌರವ ಸಿಗುತ್ತದೆಯೋ ಅದನ್ನು ಉಳಿಸಿಕೊಳ್ಳಲು ಹವಣಿಸುವ ದಿಸೆಯಲ್ಲಿ ಹೋರಾಟ ನಡೆಸುತ್ತಿದ್ದಾಳೆ. ತಮ್ಮ ಆತ್ಮ ತೃಪ್ತಿಗಾಗಿ ಕಷ್ಟ ನಿಷ್ಠುರವನ್ನು ಎದುರಿಸಲು ಸಿದ್ಧರಾಗಿದ್ದಾರೆ.

ಒಟ್ಟಿನಲ್ಲಿ ಮಧ್ಯಮ ವರ್ಗದ ಮಹಿಳೆಯರಲ್ಲಿ ಜಾಗೃತಿಯಾಗದ ಹೊರತು ಸಂಪೂರ್ಣ ವ್ಯವಸ್ಥೆ ಬದಲಾಗದು. ಈ ದಿಸೆಯಲ್ಲಿ ಕಾರ್ಯಪ್ರವೃತ್ತರಾಗಲು ಬೆಂಬಲಿಸೋಣ.

## ಮತ ಚಲಾವಣೆ ಹಕ್ಕಿಗಾಗಿ ಕುವೈತ್ ಮಹಿಳೆಯರ ಹೋರಾಟ

ಕುವೈತಿನ ಐದು ಮಹಿಳಾ ಸಂಸ್ಥೆಗಳು, ಮಹಿಳೆಯರ ರಾಜಕೀಯ ಹಕ್ಕುಗಳಿಗಾಗಿ ಸಕ್ರಿಯವಾಗಿ ಹೋರಾಡುತ್ತಿದ್ದಾರೆ. 1961ರಲ್ಲಿ ರಚಿಸಲ್ಪಟ್ಟ ಸಂವಿಧಾನವು, ಮಹಿಳೆಗೆ ಮತಹಾಕುವ, ಹಾಗೂ ಚುನಾವಣೆಗೆ ನಿಲ್ಲುವ ಹಕ್ಕು ನೀಡಿದರೂ ಆಚರಣೆಯಲ್ಲಿ ಪುರುಷರು ಮಾತ್ರ ಮತ ಚಲಾಯಿಸುವ, ಚುನಾವಣೆಗೆ ನಿಲ್ಲುವ ಹಕ್ಕನ್ನು ಪಡೆದಿದ್ದಾರೆ.

ಇತ್ತೀಚೆಗೆ ಅಲ್ಲಿ ನಡೆದ ಮಹಿಳಾ ಸಮಾವೇಶದಲ್ಲಿ, ಸಂವಿಧಾನದ ಪ್ರಕಾರ ಮಹಿಳೆಯರಿಗೆ ಮತ ಚಲಾಯಿಸುವ, ಚುನಾವಣೆಗೆ ನಿಲ್ಲುವ ಹಕ್ಕನ್ನು ನೀಡಿ, ಆ ಮೂಲಕ ಅವರ ರಾಜಕೀಯ ಸ್ವಾತಂತ್ರ್ಯವನ್ನು ಗುರುತಿಸಬೇಕೆಂದು ಕೇಳಲಾಯಿತು. ಶಾಸನ ಸಮ್ಮತವಾದ ಹಕ್ಕುಗಳ ಬಗ್ಗೆ ಮಹಿಳೆಯರಲ್ಲಿ ಹೆಚ್ಚಿನ ಅರಿವು ಮೂಡಿಸುವುದೇ ಸಮಾವೇಶದ ಉದ್ದೇಶವಾಗಿತ್ತು.

ಸಮಾವೇಶದಲ್ಲಿ ವಕೀಲರು, ನ್ಯಾಯಾಧೀಶರು, ಇಸ್ಲಾಂ ವಿದ್ವಾಂಸರು ಹಾಗೂ ಮಹಿಳಾ ಸೊಸೈಟಿಗಳನ್ನೊಳಗೊಂಡ ಒಂದು ಮಂಡಳಿಯನ್ನು ಸ್ಥಾಪಿಸಬೇಕೆಂಬ ನಿರ್ಣಯವನ್ನು ಸರ್ಕಾರದ ಮುಂದಿಡಲಾಯಿತು. ಕುವೈತಿನ ಹೊಸ ಬದಲಾವಣೆಯ ಹಿನ್ನೆಲೆಯಲ್ಲಿ ಮಹಿಳೆಗೆ ಸಂಬಂಧಪಟ್ಟ ಹಕ್ಕುಗಳ ಪರಿಶೀಲನೆ, ಮಂಡಳಿಯ ಉದ್ದೇಶವಾಗಬೇಕೆಂದು ತೀರ್ಮಾನಿಸಲಾಗಿದೆ.

ಶಿಕ್ಷಣ ಕ್ಷೇತ್ರದಲ್ಲಿನ ಪ್ರಗತಿಯಿಂದಾಗಿ ಉದ್ಯೋಗ ಹಾಗೂ ಉನ್ನತ ಹುದ್ದೆಗಳ ಅವಕಾಶ ಮಹಿಳೆಯರಿಗೆ ದೊರಕುತ್ತದೆ. ಕುವೈತ್‌ನ ವಿಶ್ವವಿದ್ಯಾಲಯದಲ್ಲಿ ಮೂರನೆ ಎರಡರಷ್ಟು ಮಹಿಳೆಯರಿದ್ದಾರೆ, ಶಿಕ್ಷಣದಲ್ಲಿ ಮಹಿಳೆಯರು ಹೆಚ್ಚಿನ ಪ್ರಗತಿ ಸಾಧಿಸುತ್ತಿದ್ದಾರೆ. ಹೆಚ್ಚಿನ ಓದಿಗೆಂದು ಹೊರದೇಶಗಳಿಗೂ ಹೋಗುತ್ತಿದ್ದಾರೆ. ಶಿಕ್ಷಣ ಕ್ಷೇತ್ರದಲ್ಲಿ ಪ್ರಗತಿ ಹಾಗು ಉದ್ಯೋಗಾವಕಾಶ ರಾಜಕೀಯ ಹಕ್ಕುಗಳ ಬಗ್ಗೆ ಚಿಂತಿಸುವುದಕ್ಕೆ ಅವಕಾಶ ಮಾಡಿಕೊಡುವುದು ಸಹಜ ಎಂದು ಉನ್ನತ ಶಿಕ್ಷಣ ಖಾತೆಯ ಕಾರ್ಯದರ್ಶಿಯಾದ ಡಾ॥ ರಾಶಾ ಅಲ್ ಜಮೀಲ್ ಅಭಿಪ್ರಾಯ ಪಡುತ್ತಾರೆ. ನಿಧಾನವಾಗಿ ಮಹಿಳೆಯರು ತಮ್ಮ ಒತ್ತಡವನ್ನೂ ತೀವ್ರಗೊಳಿಸುತ್ತಿರುವುದು ಈಗಲ್ಲದಿದ್ದರೂ ಮುಂದಿನ ಜನಾಂಗಕ್ಕಾದರೂ ಫಲ ನೀಡಬಹುದು.

ಕೃಪೆ : ಟೈಮ್ಸ್ ಆಫ್ ಇಂಡಿಯಾ

# ನನ್ನ ಕವಿತೆಯ ಧ್ವನಿ

ಸಂತೆಗೆ ಮೂರು ಮೊಳ
ನೇಯುವಂತೆ ನೇಕಾರ
ಬರೆಯಲಾರೆ ನಾ ಕವಿತೆಯ
ಕೊತ ಕೊತ ಕುದಿವ ಅಕ್ಕಿ
ಹದವಾಗಿ ಬೆಂದು
ಅನ್ನವಾಗಬೇಕಿದೆ
ನನ್ನಂತರಂಗದಲ್ಲೊಂದು
ನರಳುವ ಗಿಡ ಅರಳಿಸಲಾಗದೆ
ಹೂವು, ದೊರಕಬೇಕಿದೆ ಅದಕೆ
ಮಣ್ಣು, ನೀರು, ಗೊಬ್ಬರ
ತನ್ಮಯತೆಯಿಂದ ಜೇಡ
ನೇಯುವಂತೆ ಬಲೆಯ
ನಾ ಹೆಣೆಯ ಬೇಕಿದೆ
ಕವಿತೆಯ
ನನ್ನಂತರಂಗವ ಬಿಚ್ಚಿ
ಹೆಣ್ಣ ಸೌಂದರ್ಯಕ್ಕೆ ಮಾರುಹೋದ ಕವಿವರ್ಯರೇ
ಚಿಗರೆಯ ಕಣ್ಣು
ಸಂಪಿಗೆಯ ಮೂಗು
ಕಮಲವದನ....ಇತ್ಯಾದಿ....ಇತ್ಯಾದಿ
ಉಪಮಾತೀತ ವರ್ಣನೆಗಳು
ನಿಲುಕುವುದಿಲ್ಲ ನನ್ನ
ಕವಿತೆಯ ಪ್ರಾಸಕೆ
ನನ್ನ ಕಣ್ಣಲ್ಲಿ
ಇಣುಕುತ್ತಿರುವುದೊಂದು
ಬೇಯುತ್ತಿರುವ ಹೃದಯ
ಅಡಗಿಹುದಿಲ್ಲಿ ನೋವಿನಲ್ಲೂ
ನಲಿವನ್ನು ಹಿಡಿಡಿಡುವ ಯತ್ನ

ಬಿಗಿದಿಟ್ಟಿರುವ ತುಟಿಗಳಲ್ಲಿ
ದುಃಖವನ್ನು ಅಡಗಿಸಿಟ್ಟು
ನಗಬೇಕೆನ್ನುವ ಪ್ರಯತ್ನ
ಹಾಕಬೇಕಿದೆ....
ತಾಳಕ್ಕೆ ತಕ್ಕ ಲಯ
ಸದ್ಗೃಹಿಣಿಯಾಗಿ
ಸಹೃದಯ ಮಾತೆಯಾಗಿ
ಹೀಗೇ ಏನೇನೋ
ಆಗಬೇಕಿದೆ....
ಆದರ್ಶ ಮೂರ್ತಿ
ಕಡೆದಿಟ್ಟ ವಿಗ್ರಹದಂತೆ
ಅಕಸ್ಮಾತ್
ಎಲ್ಲೋ ತಪ್ಪಿದ ಲಯ
ನಿನ್ನಂತರಂಗದ
ಸ್ವಾಭಿಮಾನ ಸಿಡಿದಿದೆ
ಸಣ್ಣ ಕಿಡಿಯಾಗಿ
ಆಗ ನೀ ಮಾರಿ
ಬಲು ಹೆಮ್ಮಾರಿ
ಸಾಕು....
ಈ ಸರ್ಕಸ್ ಬದುಕು
ಧ್ವನಿಯೆತ್ತು
ನಿನ್ನ ಚೈತನ್ಯಕೆ
ಸಾಕು ಮಾರುವೇಷ
ಹೊರ ಹೊಮ್ಮಿಸು
ನಿನ್ನಂತರಂಗದ ಧ್ವನಿಯ

○ ಪ್ರೇಮಾವತಿ

# ನಿಗೂಢವಾಗುವ ಸಾವುಗಳು

● ಗೌರಮ್ಮ

ನಿರ್ಮಲ ಅವಳ ತಂದೆ ತಾಯಿಗಳಿಗೆ ಒಬ್ಬಳೇ ಮಗಳು. ಸಾಕಷ್ಟು ವರದಕ್ಷಿಣೆ, ಬಂಗಾರ ಕೊಟ್ಟು ಅವಳ ಮದುವೆ ಮಾಡಿದರು. ಒಂದು ಸುಧಾರಿಸಿದ ಹಳ್ಳಿಯಿಂದ ಇನ್ನೊಂದು ಕೊಂಪೆಯ ಹಳ್ಳಿಯಲ್ಲಿ ಅವಳ ಜೀವನ ಪ್ರಾರಂಭವಾಯಿತು. ತವರು ಮನೆಯಲ್ಲಿ ಸುಖವಾಗಿ ಬೆಳೆದ ನಿರ್ಮಲಳಿಗೆ ಗಂಡನ ಮನೆಯಲ್ಲಿ ಅಡಿಗೆಯ ಕೆಲಸವಷ್ಟೇ ಅಲ್ಲದೆ ಗದ್ದೆ-ತೋಟದ ಕೆಲಸವನ್ನೂ ಮಾಡ ಬೇಕಾಗಿತ್ತು'. ಅತ್ತೆ, ಮೈದುನರು ನಿರ್ಮಲಳಿಗೆ ಗದ್ದೆ, ತೋಟದ ಕೆಲಸ ಬರುವುದಿಲ್ಲ ಎಂದು ಗೊಣಗುತ್ತಿದ್ದರು. ಗಂಡ ಪ್ರೀತಿಯಿಂದ ಆಕೆಯನ್ನು ನೋಡಿಕೊಳ್ಳು ತ್ತಿದ್ದರೂ ಕೂಡ ಅತ್ತೆಗೆ ಆಕೆಗೆ ಇನ್ನೂ ತವರು ಮನೆ ಯಿಂದ ತರಬೇಕಾಗಿದ್ದ ವಸ್ತುಗಳ ಕಡೆಯೇ ಗಮನ. ಹೀಗೆಯೇ ಆರು ತಿಂಗಳು ಕಳೆದ ನಿರ್ಮಲ ತವರು ಮನೆಗೆ ಹೊರಟು ನಿಂತಾಗ, ಅತ್ತೆ ಉಂಗುರ ತರ ಬೇಕೆಂದು ತಾಕೀತು ಮಾಡಿ ಕಳಿಸಿದಳು. ಗರ್ಭಿಣಿ ಮಗ ಳನ್ನು ಕಂಡ ತಂದೆ-ತಾಯಿಗಳು ಸಂತೋಷ ಪಟ್ಟರು, ಒಂದು ತಿಂಗಳ ನಂತರ ಗಂಡನ ಮನೆಗೆ ಹೊರಟು ಅತ್ತೆ ಉಂಗುರ ತರಲು ಹೇಳಿದ್ದಾರೆ ಎಂದಳು. ಅಣ್ಣ ತನ್ನ ಉಂಗುರ ಕೊಡುತ್ತೇನೆಂದಾಗ ನಿರಾಕರಿಸಿದಳು. ಗಂಡನ ಮನೆಗೆ ಹೋದ ನಂತರ ತೌರಿನಿಂದ ಉಂಗುರ ತರಲಿಲ್ಲ ವೆಂದು ಹೀನಾಯುವಾಗಿ ಕಂಡರು. ಮುಂದೆ ಅವಳ ಪಾಲಿನ ದುರ್ದಿನ ಎದುರಾಯಿತು. ಗದ್ದೆಯಿಂದ ಬಂದ ಗಂಡ 'ನಿಮ್ಮಿ ತುಂಬಾ ಹಸಿವಾಗಿದೆ ಊಟ ಬಡಿಸು' ಎಂದಾಗ, ನಿರ್ಮಲ ನಗುತ್ತಾ ಊಟಕ್ಕೆ ಬಡಿಸಿದಳು. ಉಂಡು ಹೊಲಕ್ಕೆ ಹೋದ ಗಂಡ ಮನೆಗೆ ಬರುವುದ ರೊಳಗೆ ನಿರ್ಮಲೆ ಹೆಣವಾಗಿದ್ದಳು. ತನ್ನ ಪತಿಯ ಸಾವಿಗೆ ಕಾರಣ ತಿಳಿಯದೆ ಗೋಳಾಡಿದ. ಅಣ್ಣ-ಅತ್ತಿಗೆ, ತಂದೆ-ತಾಯಿ ಬಂಧುಗಳು ದುಃಖದಿಂದ ಹುಚ್ಚರಂತಾ ದರು. ಅಣ್ಣ ಪೋಲೀಸರಿಗೆ ದೂರು ನೀಡುವೆನೆಂದು ಆವೇಶದಿಂದ ಅರಚಿದ, ಆದರೆ ನೆರೆದವರು ಬಂದು ಬಳಗ ದವರು ಇಲ್ಲದ ಗಲಾಟೆ ಏಕೆ ? ಏನಾದರೂ ಸತ್ತವಳೇನು ಬದುಕಿ ಬರುತ್ತಾಳೆಯೇ ಎಂದಾಗ ಸುಮ್ಮನಾಗಬೇಕಾ ಯಿತು. ಏನಾದರೇನು ? ನಿರ್ಮಲೆಯ ಸಾವು ಆತ್ಮಹತ್ಯೆಯೇ, ಕೊಲೆಯೇ ಎಂಬುದು ನಿಗೂಢ ವಾಗಿಯೇ ಉಳಿಯಿತು.

ಮಾಲತಿ ತುಂಬಾ ಚೆಲುವೆ ಸಾಕಷ್ಟು ಅನುಕೂಲ ಇದ್ದ ಅವಳ ತಂದೆ ತಾಯಿಗಳು ಸಾಕಷ್ಟು ವರೋಪಚಾರ, ಬಂಗಾರ ಕೊಟ್ಟು ಆಡಂಬರದಿಂದ ಮದುವೆ ಮಾಡಿದರು. ಗಂಡನ ಮನೆಯಲ್ಲೂ ಕೂಡ ಮಾಲತಿ ಸುಖವಾಗಿಯೇ ಇದ್ದಳು. ವಿದ್ಯಾವಂತ ಗಂಡ, ವ್ಯವಸಾಯವನ್ನೇ ವೃತ್ತಿಯಾಗಿಸಿಕೊಂಡು ನೆಮ್ಮದಿಯಿಂದ ಬದುಕುತ್ತಿದ್ದ ಸಂಸಾರ. ಮಾಲತಿ ಹಾಗೂ ಅವಳ ಗಂಡ ತುಂಬಾ ಅನ್ಯೋನ್ಯವಾಗಿಯೇ ಇದ್ದರು. ಮಾವ ಇದ್ದರೂ ಪರ ಪುರುಷನ ಜೊತೆ ಮಾಲತಿಯ ಅತ್ತೆಗೆ ಅಕ್ರಮ ಸಂಬಂಧ ವಿತ್ತು. ಇದನ್ನು ಮಾಲತಿ ಒಮ್ಮೆ ನೋಡಿಬಿಟ್ಟಳು. ಸೊಸೆಗೆ ಈ ವಿಷಯ ಗೊತ್ತಾಯಿತಲ್ಲ. ಅವಳಿಂದ ಬೇರೆ ಯವರಿಗೆ ಗೊತ್ತಾದರೆ ತನ್ನ ಬಣ್ಣ ಬಯಲಾಗುವುದಲ್ಲ ಎಂಬ ಭಯ ಅತ್ತೆಗೆ ಉಂಟಾಯಿತು. ತನ್ನ ನಡತೆಯನ್ನು ಮುಚ್ಚಿಟ್ಟು ಕೊಳ್ಳಲು ಸೊಸೆಯೇ ನಡತೆಗೆಟ್ಟವಳು ಎಂದು ಮಗನಿಗೆ ಇಲ್ಲ ಸಲ್ಲದ ಚಾಡಿ ಹೇಳಿ ಆವನಿಗೆ ಸಂಶಯ ಬರುವಂತೆ ಮಾಡಿದಳು. ಇದರಿಂದ ಮಾಲತಿಯ ಗಂಡನಿಗೆ ಅವಳಲ್ಲಿ ಅನುಮಾನ ಉಂಟಾಯಿತು. ಅವಳು ಹೇಗೇ ಇದ್ದರೂ ಅವಳಲ್ಲೇನೋ ತಪ್ಪಿರುವಂತೆಯೇ ಅವನಿಗೆ ಕಂಡಿತು. ಜೊತೆಗೆ ತಾಯಿಯ ಕುಮ್ಮಕ್ಕು ಬೇರೆ. ಸಂಶಯ ಭೂತ ಆವರಿಸಿದ ಮೇಲೆ ಇನ್ನೇನು ? ತಾಯಿ-ಮಗ ಇಬ್ಬರೂ ಸಾಕಷ್ಟು ಹಿಂಸೆ ಕೊಟ್ಟು ಅವ ಳನ್ನು ತವರಿಗೆ ಅಟ್ಟಿದರು. ಕಳಂಕ ಹೊತ್ತ ಮಗಳನ್ನು ಮನೆಯಲ್ಲಿ ಇರಿಸಿಕೊಳ್ಳಲು ನಿರಾಕರಿಸಿದ ಮಾಲತಿಯ ತಂದೆ ತಾಯಿಗಳು ಅವಳನ್ನು ಮತ್ತೆ ಗಂಡನ ಮನೆಗೇ ಕಳಿಸಿದರು. ತಿರುಗಿ ಬಂದ ಮಾಲತಿಯನ್ನು ಕಂಡು ತಾಯಿ, ಮಗ ಕುಪಿತರಾದರು. ಅಂದು ರಾತ್ರಿ ಮಾಲತಿಯ ಅಂತ್ಯದ ಕರಾಳ ದಿನ. ಮಾಲತಿ ಪ್ರತಿಭಟಿ ಸಿದರೂ ಲೆಕ್ಕಿಸದೆ ಮಧ್ಯರಾತ್ರಿಯಲ್ಲಿ ಕಾಡಿಗೆ ಕರೆದು ಕೊಂಡು ಹೋಗಿ ಬಲವಂತವಾಗಿ ವಿಷ ಕುಡಿಸಿ ಮಾಲತಿ

ಇನ್ನಿಲ್ಲದಂತೆ ಮಾಡಿದರು. ಮೊದಲೆ ಕೊಟ್ಟ ಹೆಣ್ಣು ಕುಲದ ಹೊರಗೆ ಎಂದು ತಿಳಿದಿದ್ದ ಅವಳ ತಂದೆ ತಾಯಿಗಳು ಪೋಲೀಸರಿಗೆ ದೂರು ಕೊಡಲೇ ಇಲ್ಲ. ದುಃಖ ಪಡುವುದೊಂದೇ ಅವರ ಕೆಲಸವಾಯಿತು.

ಹೀಗೆ ಪ್ರಕೃತಿಯಲ್ಲಿ ವಿಲೀನವಾಗುವ ಸಾವುಗಳಿಗೆ ಸಾಕ್ಷಿ ಯಾರು ? ಅವುಗಳ ಆತ್ಮಕ್ಕೆ ನ್ಯಾಯ ದೊರಕಿಸಲು ಹೋರಾಡುವವರು ಯಾರು ? ಇಂತಹ ಶೋಷಣೆಗಳು ಆಗಿಂದಾಗ್ಗೆ ನಡೆಯುತ್ತಲೇ ಇದ್ದರು ಅವುಗಳನ್ನು ತಡೆಗಟ್ಟಲು ಹೇಗೆ ಸಾಧ್ಯ ? ಈ ಎಲ್ಲಾ ಪ್ರಶ್ನೆಗಳೂ ಪ್ರಶ್ನೆಗಳಾಗಿಯೇ ಉಳಿಯುತ್ತಲೇ ಇವೆ.

## ಬಾಂಗ್ಲಾ ದೇಶದಲ್ಲಿ ಹೆಚ್ಚಾಗುತ್ತಿರುವ ಗರ್ಭಪಾತಕ್ಕೆ ಸಂಬಂಧಿಸಿದ ಸಾವು

ಬಾಂಗ್ಲಾ ದೇಶದಲ್ಲಿ 10000 ತಾಯುಂದಿರಲ್ಲಿ 600 ಮಂದಿ ಮಗು ಹುಟ್ಟುವ ಸಮಯದಲ್ಲಿ ಅಥವಾ ಗರ್ಭಾವಸ್ಥೆಯಲ್ಲಿ ಸಾವಿಗೀಡಾಗುತ್ತಾರೆಂದು ತಿಳಿದು ಬಂದಿದೆ. ದ. ಏಶಿಯಾದಲ್ಲಿ ತಾಯ್ತನಕ್ಕೆ ಸಂಬಂಧಿಸಿದ ಸಾವಿನ ಸಂಖ್ಯೆಯನ್ನು ಗಮನಿಸಿದಾಗ ಅತೀ ಹೆಚ್ಚು ನೇಪಾಳದಲ್ಲಾದರೆ 2ನೇ ಸ್ಥಾನ ಬಾಂಗ್ಲಾದೇಶಕ್ಕೆ ಸಲ್ಲುತ್ತದೆ. ಢಾಕಾದ ಸ್ತ್ರೀರೋಗ ತಜ್ಞರಾದ ಪ್ರೊ॥ ಫಿರೋಜಾ ಬೇಗಂ ಅವರು ಹೇಳುವಂತೆ, ಬಡ ಹಾಗು ಅನಕ್ಷರಸ್ಥ ಮಹಿಳೆಯರೇ ಹೆಚ್ಚಿನ ಸಂಖ್ಯೆಯಲ್ಲಿ ಸಾವಿಗೀಡಾಗುತ್ತಾರೆ. ಬೇರೆ ದಾರಿಯಿಲ್ಲದೆ ಢೋಂಗಿ ವೈದ್ಯರ ಬಳಿ ಹೋಗುವುದರಿಂದಲೆ ಈ ಸಂಖ್ಯೆ ಹೆಚ್ಚಿದೆಯೆಂದು ಅವರು ಹೇಳಿದ್ದಾರೆ.

ಒಂದು ಅಧ್ಯಯನದ ಪ್ರಕಾರ, 1300 ಗರ್ಭಪಾತದ ಕೇಸುಗಳನ್ನು ಪರೀಕ್ಷಿಸಿದಾಗ ಅವುಗಳಲ್ಲಿ ಬಹಳಷ್ಟು 13 ಅಥವಾ ಅದಕ್ಕೂ ಹೆಚ್ಚಿನ ವಾರಗಳ ಗರ್ಭಾವಸ್ಥೆಯ ಸಮಯದಲ್ಲಿ ನಡೆದಿದ್ದವು. ಈ ಮುಂದುವರೆದ ಗರ್ಭಾವಸ್ಥೆಯ ಹಂತದಲ್ಲೂ ಆಸ್ಪತ್ರೆಗಳಲ್ಲಿ ವೈದ್ಯರು ಗರ್ಭಪಾತಕ್ಕೆ ಸಮ್ಮತಿಸುವುದಿಲ್ಲ. ಅಲ್ಲಿ ಕಾನೂನಿನ ಪ್ರಕಾರ ಗರ್ಭಪಾತ ಅಪರಾಧ. ಈ ಅಧ್ಯಯನದ ಪ್ರಕಾರ ಅರ್ಧಕ್ಕೂ ಹೆಚ್ಚಿನ ಮಹಿಳೆಯರು ಗಿಡಮೂಲಿಕೆ, ಕೋಲು ಮುಂತಾದವನ್ನು ಗರ್ಭಕೋಶದೊಳಗೆ ಹಾಕಿಕೊಂಡು ಗರ್ಭಪಾತ ಮಾಡಿಕ್ಕೊಳ್ಳುತ್ತಾರೆ, ಇನ್ನು ಕೆಲವರು ಢೊಂಗಿ ವೈದ್ಯರು ನೀಡುವ ಔಷಧಿಗಳನ್ನು ತಾವೇ ಚುಚ್ಚಿಕೊಂಡು ಗರ್ಭಪಾತ ಮಾಡಿಕೊಳ್ಳುತ್ತಾರೆ.

ಸೂಕ್ತ ಗರ್ಭನಿರೋಧಕಗಳು ಲಭ್ಯವಾದರೆ ಗರ್ಭಪಾತಕ್ಕೆ ಸಂಬಂಧಿಸಿದ ಎಷ್ಟೋ ಸಾವನ್ನು ತಡೆಯಬಹುದು. UNICEF ನ ಒಂದು ವರದಿಯ ಪ್ರಕಾರ ನಾಲ್ಕನೇ ಒಂದರಷ್ಟು ಸಾವು ಸಂಭವಿಸುವುದು 18 ವಯಸ್ಸಿನೊಳಗಿನ ಅಥವಾ 35 ದಾಟಿದ ಹೆಂಗಸರಲ್ಲಿ. ಈಗಾಗಲೆ 3–4 ಮಕ್ಕಳಿರುವ, 30–35 ದಾಟಿದ ಹೆಂಗಸರೆ ಹೆಚ್ಚಿನ risk ತೆಗೆದುಕೊಂಡು ಗರ್ಭಪಾತ ಮಾಡಿಸಿಕೊಳ್ಳುತ್ತಾನೆ. ಢಾಕಾದ ಮೆಡಿಕಲ್ ಕಾಲೇಜಿನ ಇಬ್ಬರು ವೈದ್ಯರು ನಡೆಸಿದ ಅಧ್ಯಯನದ ಪ್ರಕಾರ, ಶೇ. 72ರಷ್ಟು ಗರ್ಭಪಾತಗಳು ಸ್ವಚ್ಛವಾಗಿರದ ವಾತಾವರಣದಲ್ಲಿ ನಡೆಯುತ್ತವೆ. ಈ ಕಾರಣದಿಂದಾಗಿ ಏಕ್ಲಾಂಸಿಯಾ ಮತ್ತು ಸೆಪ್ಟಿಕಾಮಿಯ ಖಾಯಿಲೆಗೆ ತುತ್ತಾಗಿ ಸಾವು ಸಂಭವಿಸುತ್ತದೆ. ಏಕ್ಲಾಂಸಿಯ ಎಂದರೆ ಗರ್ಭಿಣಿ ಸ್ತ್ರೀಯರಲ್ಲಿ ಕಾಣಿಸಿಕ್ಕೊಳ್ಳುವ ಅಪಸ್ಮಾರ ಅಡವಾ ಸನ್ನಿ, ಸೆಪ್ಟಿಕಾಯಿ ಉಂಟಾಗುವುದು ನಂಜಿನಿಂದಾಗಿ

ಬಾಂಗ್ಲಾದೇಶದಲ್ಲಿ ಬಡತನದಿಂದಾಗಿ ಹೆಚ್ಚಾಗಿ ಮಗುವಿನ ಜನನ ಮನೆಯಲ್ಲೆ ಆಗುತ್ತದೆ. ವಯಸ್ಸಾದ ಹೆಂಗಸರು ಅಥವಾ ವಾಯಿಗಳ ಸಹಾಯ ಪಡೆಯುವುದು ಹೆಚ್ಚು. ಆಕಸ್ಮಾತ್ ಜನನ ಸಮಯದಲ್ಲಿ ಹೆಚ್ಚಿನ ತೊಂದರೆಯಾದರೆ ತಾಯಿ, ಮಗು ಇಬ್ಬರೂ ಸಾಯುವ ಸಂಭವವೆ ಹೆಚ್ಚು. ಕಾರಣ ಅಲ್ಲಿ ತುರ್ತು ವೈದ್ಯಕೀಯ ಚಿಕಿತ್ಸೆಗೆ ಹತ್ತಿರವಿರುವ ಹಳ್ಳಿಗಳು ಬಹಳ ಕಡಿಮೆ.

ಕೃಪೆ : ಟೈಂಸ್ ಆಫ್ ಇಂಡಿಯಾ

# ವಧು ಪರೀಕ್ಷೆ

**ಒಂದು ಅವಲೋಕನ**

● ವೆಂಕಟೇಶ್ವರಿ

ನಮ್ಮ ಜೀವನವೇ ಒಂದು ಪರೀಕ್ಷೆ ಎಂದರೆ ತಪ್ಪಾಗದು. ಜೀವನದ ಪರೀಕ್ಷೆಯಲ್ಲೇ ಹತ್ತು ಹಲವಾರು ಹಂತಗಳಲ್ಲಿ ನೂರಾರು ಪರೀಕ್ಷೆಗಳನ್ನು ನಾವು ಎದುರಿಸುತ್ತೇವೆ. ಶಾಲಾ ಕಾಲೇಜುಗಳಲ್ಲಿ ನಡೆಯುವ ಪರೀಕ್ಷೆಗಳು ! ನಂತರ ಹೆಣ್ಣಾದವಳು ಒಂದಲ್ಲಾ ಒಂದು ಹಂತದಲ್ಲಿ ಅತಿ ಮಹತ್ವದ ಒಂದು ಪರೀಕ್ಷೆಯನ್ನು ಎದುರಿಸಲೇಬೇಕು ! ಅದೇ ವಧು ಪರೀಕ್ಷೆ !

ನಮ್ಮದು ಅಭಿವೃದ್ಧಿ ಹೊಂದುತ್ತಿರುವ ದೇಶ. ಕೈಗಾರಿಕೆಯಲ್ಲಿ ಸಾಕಷ್ಟು ಮುಂದುವರಿದ ದೇಶ. ನಮ್ಮ ದೇಶದ ಸಿಂಹಪಾಲು ಜನರು ಹಳ್ಳಿಗಳಲ್ಲಿ ವಾಸಿಸುತ್ತಾರೆ. ಹಳೇ ಸಂಪ್ರದಾಯಗಳು, ಮೂಢನಂಬಿಕೆಗಳು, ಇನ್ನಿತರ ಆಚಾರವಿಚಾರಗಳು ದೇಶದ ಮುಕ್ಕಾಲು ಜನರನ್ನು ಇನ್ನೂ ಬಿಟ್ಟಿಲ್ಲ. ಅವುಗಳಲ್ಲಿ ವಧು ಪರೀಕ್ಷೆಯೂ ಒಂದು. ಬಹಳ ಮುಂದುವರಿದ ಮತ್ತು ಬಹಳ ಹಿಂದುಳಿದ ಕುಟುಂಬಗಳು ಮೂಢನಂಬಿಕೆಗಳು ಮತ್ತು ಆಚಾರ ವಿಚಾರಗಳ ಬಹಳ ತೊಂದರೆಗೆ ಈಡಾಗುವದಿಲ್ಲ. ಮಧ್ಯಮ ವರ್ಗದಲ್ಲಿ ವಧೂ ಪರೀಕ್ಷೆ ಯಾವ ರೀತಿ ನಡೆಯುತ್ತದೆ ಎಂದು ಕೆಳಗೆ ಕೊಟ್ಟಿರುವ ಎರಡು ಉದಾಹರಣೆಗಳೇ ಸಾಕ್ಷಿಗಳು !

ಮಧ್ಯಮ ವರ್ಗದ ದೂರ ಸಂಬಂಧಿಯೊಬ್ಬರ ಮನೆಯಲ್ಲಿ ಸಡಗರವೋ ಸಡಗರ. ವಿಷಯವೇನೆಂದು ಕೇಳಿದಾಗ ಮನೆಯಾಕೆ "ಇಂದು ಹೆಣ್ಣು ನೋಡಲು ಬರುತ್ತಾರೆ" ಎಂದರು. ಅಂದರೆ ಮದುವೆ ಮುಕ್ಕಾಲು ಭಾಗ ನಿರ್ಣಯವಾದಂತೆ ಎಂದುಕೊಂಡೆ. ಯಾಕೆಂದರೆ ಮೊದಲು ವರಮಹಾಶಯ ಮತ್ತು ಇನ್ನಿತರರು ಹೆಣ್ಣು ನೋಡಿ ಹೋಗಿದ್ದರು ಮತ್ತು ವರೋಪಚಾರದವರೆಗೂ ವಿಷಯ ಮುಂದುವರಿದಿತ್ತು. ವರನೇ ನೋಡಿ ಹೋದ ಮೇಲೆ ಇನ್ನಿತರರು ಒಪ್ಪಲೇಬೇಕು ಅಷ್ಟು ಮುಂದುವರಿದಿತ್ತು ಆ ವಿಚಾರ. ಆದರೆ ಬಂದವರು ಊಟ ಉಪಚಾರ ಎಲ್ಲವೂ ಸ್ವೀಕರಿಸಿ ಹೋದರು ! ಮತ್ತೆ ಮರಳಿ ಬರಲಿಲ್ಲ. "ಹೆಣ್ಣು ತೀರಾ ತೆಳ್ಳಗಿದ್ದಾಳೆ" ಎಂದು ಮುದ್ರೆಯೊತ್ತಿ ಹೋದರು ! 'ವರ' ಬರುವ ಪೂರ್ವದಲ್ಲೇ ಹುಡುಗಿ ತೆಳ್ಳಗಿದ್ದಾಳೆ ಎಂದು ಅವರಿಗೆ ಹೇಳಲಾಗಿತ್ತು. ತೆಳ್ಳಗಿದ್ದವಳು ಬೇಡವೆಂದರೆ ಯಾಕೆ ಅವರು ಅಷ್ಟು ಮುಂದುವರೆಸಿದರು.

ಇನ್ನೊಂದು ಕಡೆಗೆ ಹೀಗೆ ನಡೆಯಿತು. ವರ ಮತ್ತು ಆತನ ಗೆಳೆಯ ಇಬ್ಬರೂ ಹೆಣ್ಣು ನೋಡಿ ಹೋದರು. ವಧೂ ಕಡೆಯವರು ಆರ್ಥಿಕವಾಗಿ ತುಂಬಾ ಹಿಂದುಳಿದವರು ಎಂದು ವರನ ಕಡೆಯ ಕೆಲವರು ಮೊದಲೇ ಹೇಳಿದ್ದರು. ಆದರೂ ಹುಡುಗಿ ಪರವಾಗಿಲ್ಲ ಎಂದು ಹೇಳಿ ಹೋದರು. ತಿಂಗಳ ನಂತರ ಮತ್ತೆ ವರನ ಕಡೆಯವರ ಆಗಮನ. ವರನ ತಾಯಿ, ತಂಗಿ, ಪರಿಚಯದ ಒಬ್ಬಿಬ್ಬರು...ಉಭಯ ಕುಶಲೋಪರಿಯಾಗಿ ಮಾತು, ಕಥೆ, ಊಟ ಉಪಚಾರಗಳು ವಿಶೇಷವಾಗಿಯೇ ನಡೆಯಿತು. ನಂತರ ತಿಳಿಸಿದ್ದೇನು ? ಒಂದು ಹತ್ತು ತೊಲೆ ಬಂಗಾರ, ಇಪ್ಪತ್ತೈದು ಸಾವಿರ ಹಣ !

ಇಂತಹ ವಧೂ ಪರೀಕ್ಷೆಗಳು ಸರ್ವೇಸಾಮಾನ್ಯ. ಅದರ ಭೀಕರ ಪರಿಣಾಮಗಳ ಬಗ್ಗೆ ಉಂಡು ತೇಗಿ ಹೋದವರು ವಿಚಾರ ಮಾಡುವದಿಲ್ಲ ಎಂದು ಅನಿಸುತ್ತದೆ.

ಒಂದನೆಯದಾಗಿ ಹೆಣ್ಣು ಮಗಳು ಮಾನಸಿಕವಾಗಿ ತುಂಬಾ ಹಿಂಸೆಗೆ ಪಾತ್ರಳಾಗುತ್ತಾಳೆ. ಬಂದರು ಬೇಡಾ ಎಂದುಹೋದರು ಎಂದು ಎಲ್ಲರ ಬಾಯಲ್ಲಿ ಬಂದೇ ಬರುತ್ತದೆ.

ಎರಡನೆಯದಾಗಿ ಅಲ್ಲಿಂದಲ್ಲಿ ಜೀವನ ಮಾಡುವ ಕುಟುಂಬಗಳಿಗೆ ವಧು ಪರೀಕ್ಷೆ ಒಂದು ಸತ್ವ ಪರೀಕ್ಷೆಯೇ ಸರಿ. ಬಂದವರಿಗೆ ಒಪ್ಪವಾಗಿ ಓರಣವಾಗಿ ಊಟೋಪಚಾರ ಮಾಡಿಕಳಿಸಬೇಕೆಂಬ ಹಂಬಲ ಹೆಣ್ಣಿನ ಕಡೆಯವರಿಗೆ ಇದ್ದೇ ಇರುತ್ತದೆ. ಇಂದಿನ ಬೆಲೆಯೇರಿಕೆ ದಿನಗಳಲ್ಲಿ ಮಧ್ಯಮ ವರ್ಗದವರು ಜೀವನ ನಡೆಸುವುದೇ ದುಸ್ತರ !

ಮೊದಲು ಹೇಳಿದ ಎರಡು ಘಟನೆಗಳಲ್ಲೂ, ತಮ್ಮ ಸ್ಥಿತಿಗತಿಗಳನ್ನು ಒಂದಲ್ಲಾ ಒಂದು ರೀತಿಯಲ್ಲಿ ಹೇಳಿ ತಿಳಿಸಿದ್ದಾರೆ. ಆದರೂ ಸಹ ಮತ್ತೆ ನೋಡಲು ಬಂದಿದ್ದು ಗಂಡಿನ ಕಡೆಯವರ ಒಂದು ಮಹಾದೊಡ್ಡ ತಪ್ಪು ಎನ್ನಬಹುದು. ಇಂತಹ ಘಟನೆಗಳು ನೆರೆಕರೆಯವರಲ್ಲೂ,

ಬಂಧುಗಳಲ್ಲೂ ಮಿತ್ರರಲ್ಲೂ ಸಂಶಯ ಹುಟ್ಟಿಸಲು ಕಾರಣವಾಗಬಹುದು.

ಇದಕ್ಕೆಲ್ಲಾ ಪರಿಹಾರ ಇದೆಯೇ ? ಪ್ರಶ್ನೆ ಎಷ್ಟು ಸುಲಭವಿದೆಯೋ ಉತ್ತರವೂ ಅಷ್ಟೇ ಸುಲಭವಿದೆ. ಕಷ್ಟ ಕೊಡುವ ಅತಿರೇಕದ ವಧು ಪರೀಕ್ಷೆಯಾದರೂ ಯಾಕೆ ಬೇಕು ? ಮದುವೆಯಾಗುವವರು ಒಬ್ಬರು ಇನ್ನೊಬ್ಬರನ್ನು ನೋಡಲೇಬೇಕು. ವರನ ತಂದೆ ತಾಯಿ ಎಲ್ಲರೂ ನೋಡಲಿ, ಆದರೆ ವರನ ಬಂಧುಬಳಗ ಇಷ್ಟ ಮಿತ್ರರು ಎಲ್ಲರೂ ಸೇರಿ ಬಂದುಹೋಗಿ, ಮತ್ತೆ ತಿರಸ್ಕರಿಸುವುದು ಸರಿಯಲ್ಲ. ಮದುವೆ ನಡೆದೇ ನಡೆಯುತ್ತದೆ ಎಂದು ಖಾತ್ರಿಯಾದಾಗ ಔಪಚಾರಿಕವಾಗಿ "ವಧು ಪರೀಕ್ಷೆ ಸಂಭ್ರಮ" ನಡೆಯುವುದೂ ಉಂಟು.

ಹೆಣ್ಣಾದವಳು ಇದನ್ನು ಹೇಗೆ ಎದುರಿಸಬೇಕು ? ತಾಯಿ, ವಧು ಎಲ್ಲರೂ ದಿಟ್ಟತನದಿಂದ ಇದನ್ನು ಎದುರಿಸಬೇಕು. ಇದಕ್ಕೆ ಶಿಕ್ಷಣ ಬೇಕು. 21ನೆ ಶತಮಾನಕ್ಕೆ ಕಾಲಿಡುವ ಇಂದು ಹೆಣ್ಣನ್ನು ಕೀಳಾಗಿ ನೋಡುವವರನ್ನು ಕಂಡರೆ ಒಂದೆಡೆ ಪಾಪ ಎನಿಸುತ್ತದೆ ಇನ್ನೊಂದೆಡೆ ಸಿಟ್ಟೂ ಬರುತ್ತದೆ. ●

---

## ಬೇಡದ ಬದುಕು

ಬೆಳಗ್ಗೆ

ಐದಕ್ಕೆದ್ದು ಹಾಲಿಗಲೆತದ ವಾಕಿಂಗ್ ಮುಗಿಸಿ
ಆರಕ್ಕೆ ಅಡುಗೆ ಮನೆ ಹೊಕ್ಕು
ಏಳಕ್ಕೆ ಗೊರಕೆ ಹೊಡೆವ ಗಂಡನನ್ನೆಬ್ಬಿಸಿ
ಅಲ್ಲೇ ಕಾಲುಚಾಚಿದವನ
ಕೈಗೆ ಕಾಫಿ-ಪೇಪರನಿತ್ತು
ಮಕ್ಕಳೇಳುವ ಮುನ್ನ
ಮನೆ ಚೊಕ್ಕಟದಾತುರ
ಮಕ್ಕಳೆದ್ದರಲ್ಲೊಂದಷ್ಟು ಹೊತ್ತು
ತಿಂಡಿಗೆ ಸಡಗರದ ನಡಿಗೆ
ಹತ್ತು-ಹನ್ನೊಂದರ ಹೊತ್ತಿಗೇ
ಎದ್ದು ಬಗ್ಗಿದ್ದಷ್ಟಕ್ಕೆ ಉಸ್ಸ್ss
ಎಲ್ಲೆಂದರಲ್ಲಿ ನೋವು ನೋವು

ಮಧ್ಯಾಹ್ನ

ಪಕ್ಕದಾಕೆಯ ಇಣುಕು
ಬೇಕಿರದ ಹರಟೆಗಳಲಿ
ಮಾತು-ಮನಸುಗಳೆಲ್ಲ ಖಾಲಿ ಖಾಲಿ
ನಾಲ್ಕಕ್ಕೇ ಒಂಟಿಯಾಗಿ
ಸಂಗ ಸಂಗತಿಯಿರದೆ ಸಂಕಟ
ಕಣಕಣವೂ ಹಿಂಡಿಬಿಟ್ಟಂಥ ಭಾವ
ಚಣಚಣವೂ ಮನಸ
ಪರಚುವ ಏಕಾಕಿತನ
ದೂರ ತೀರದ ಒಂಟಿ ಮರದ ಹಕ್ಕಿ

ಸಂಜೆ

ಮಕ್ಕಳ ಗಿಳಿಪಾಠ
ತಡವಾಗಿ ಬಂದವನೊಡನೆ
ಮಾತಿಗಾರಂಭಿಸುವಷ್ಟರಲ್ಲಿ
ಗಂಟೆ ಎಂಟು
ಊಟ-ಮಕ್ಕಳ ನಿದ್ದೆ
ಮನೆಗೆಲಸ ಮುಗಿದು
ಸೀರೆಗೆ ಕೈವರೆಸಿ
ದಾವಂತ ಪಟ್ಟು
ಹಾಸಿಗೆಗೋಡಿ ಬರುವಾಗ್ಗೆ
ಗೊರಕೆ ಸದ್ದು !
ತಣ್ಣನೆಯ ನಿಟ್ಟುಸಿರಿಟ್ಟು
ಮೆಲ್ಲನೆ ಮಂಚವೇರಿ
ಗೊರಕೆ ಚಲನೆಗೆ ಭಂಗ
ಬರದಂತೆ ಎಚ್ಚರ ವಹಿಸಿ
ಬೆಳಗಿನ ತಿಂಡಿ ಅಡಿಗೆಗೇನೆಂದು
ಕನವರಿಸುತ್ತಾ ಆಕಳಿಸಿ
ಮೈಚಾಚಿ ಮಲಗುವ
ಪಸಂದಕಷ್ಟಕ್ಕೇ
ಈ ಬದುಕು ಯಾಕೆ ?

● ಗೀತಾ ಡಿ.ಸಿ.

# ಗ್ರಾಮೀಣ ಹಿನ್ನೆಲೆಯಲ್ಲಿ ಹೆಣ್ಣು

○ ಅನ್ನಪೂರ್ಣ

ಹಳ್ಳಿಗಳಲ್ಲಿ ಹೆಚ್ಚಾಗಿ ಹೆಸರಿಗೆ ಮಾತ್ರ ಶಾಲೆಗಳಿರುತ್ತವೆ. ಶಾಲೆಗೆ ಸರಿಯಾದ ಕಟ್ಟಡಗಳಿರುವುದಿಲ್ಲ. ಉಪಾಧ್ಯಾಯರುಗಳ ಕೊರತೆ. ಹಾಗಾಗಿ ಶಾಲೆಗಳು ಸರಿಯಾಗಿ ನಡೆಯುವುದೇ ಇಲ್ಲ. ಹಳ್ಳಿಗಳಲ್ಲಿ ಉಪಾಧ್ಯಾಯರುಗಳಿಗೆ ವಸತಿ ಸೌಕರ್ಯ ಇರುವುದಿಲ್ಲ. ಹಾಗಾಗಿ ಅವರು ಬೇರೆ ಕಡೆಯಿಂದ ಓಡಾಡಿ ಶಾಲೆಗೆ ಸರಿಯಾದ ವೇಳೆಯಲ್ಲಿ ಪಾಠ ಮಾಡುವುದೂ ಕೂಡ ದುರ್ಲಭ. ಸ್ವಲ್ಪ ದೂರದ ಪೇಟೆಗೆ ಹಳ್ಳಿಯಿಂದ ಓಡಾಡಬೇಕೆಂದರೂ ವೇಳೆಗೆ ಸರಿಯಾಗಿ ಬಸ್ಸುಗಳಿರುವುದಿಲ್ಲ. ಹೈಸ್ಕೂಲಿಗೆ ಹೋಗಬೇಕೆಂದರೆ ಐದಾರು ಮೈಲಿ ದೂರದ ಊರಿಗೆ ಹೋಗಬೇಕು. ಕಾಲೇಜಿಗೆ ಹೋಗುವುದಂತೂ ತುಂಬಾ ಕಷ್ಟ. ಹೋಬಳಿಗೊಂದು ಕಾಲೇಜಿರುವುದಿಲ್ಲ. ಒಬ್ಬ ಹುಡುಗಿ ಎಸ್.ಎಸ್.ಎಲ್. ಸಿ. ಫಸ್ಟ್‌ಕ್ಲಾಸಿನಲ್ಲಿ ಪಾಸಾಗಿದ್ದರೂ ಅವಳನ್ನು ಕಾಲೇಜಿಗೆ ಕಳಿಸಲು ಮನೆಯಲ್ಲಿ ಒಪ್ಪುವುದಿಲ್ಲ. ದೂರದ ಕಾಲೇಜಿಗೆ ಮಗಳನ್ನು ಕಳಿಸುವುದು ಹೇಗೆ ? ಎಂಬುದು ತಂದೆತಾಯಿಗಳ ಚಿಂತೆ. ಗಂಡು ಮಕ್ಕಳಿಗೆ ಹಣ ಖರ್ಚು ಮಾಡಿದರೆ ಸಾಕು ಇನ್ನು ಹೆಣ್ಣುಮಕ್ಕಳಿಗೆ ಓದಿಸಲು ಎಲ್ಲಿಂದ ಹಣ ತರುವುದು ಎಂಬುದು ಇನ್ನು ಕೆಲ ತಂದೆ-ತಾಯಿಗಳ ಯೋಚನೆ. ಕೆಲವೊಮ್ಮೆ ಓದಿಸುವ ಅನುಕೂಲ ಇದ್ದರೂ ಹೆಚ್ಚು ಓದಿದ ಮಗಳಿಗೆ ನೌಕರಿ ಇರುವ ವರನನ್ನೇ ಹುಡುಕಬೇಕು. ಅವರು ಕೇಳಿದಷ್ಟು ವರದಕ್ಷಿಣೆ ಹೇಗೆ ಕೊಡುವುದು ಎಂಬ ಯೋಚನೆ ಕೆಲವು ತಂದೆ-ತಾಯಿಗಳಿಗೆ.

ಹಳ್ಳಿಗಳಲ್ಲಿ ಹುಡುಗಿಯರು ಎಷ್ಟೇ ಪ್ರತಿಭಾವಂತರಾಗಿದ್ದರೂ ಕೂಡ ಅವರಿಗೆ ಒಳ್ಳೆಯ ಪ್ರೋತ್ಸಾಹ, ಉತ್ತೇಜನ ಇರುವುದಿಲ್ಲ. ಹಳ್ಳಿಯಲ್ಲಿಯೇ ಬೆಳೆದ ಹಿಂದುಳಿದ ವರ್ಗದ ಒಬ್ಬ ಹುಡುಗಿ ತುಂಬಾ ಚೆನ್ನಾಗಿ ಹಾಡುತ್ತಿದ್ದಳು. ಚಿತ್ರಗೀತೆಗಳನ್ನು ಹಾಗೆಯೇ ಅನುಕರಿಸಿ ಇಂಪಾಗಿ ಹಾಡುತ್ತಿದ್ದಳು. ಆದರೆ ಅವಳಿಗೆ ಓದಲು, ಬರೆಯಲು ಬರುವುದಿಲ್ಲ. ಎಷ್ಟೇ ಪ್ರತಿಭೆಯಿದ್ದರೂ ಕಾಡಿನ ಕುಸುಮದಂತೆ ವ್ಯರ್ಥ. ಅವಳ ತಂದೆ-ತಾಯಿಗಳಿಗೆ ಅವಳ ಹಾಡುವ ಕಲೆ-ಯಾವ ದೊಡ್ಡ ವಿಷಯ ಎಂಬ ಭಾವನೆ.

ಹಳ್ಳಿಗಳಲ್ಲಿ ಹೆಚ್ಚಾಗಿ ಹೆಣ್ಣು ಮಕ್ಕಳು ಒಂದು ವಯಸ್ಸಿಗೆ ಬಂದರು ಎಂದರೆ ಅವಳು ಗಂಭೀರವಾಗಿರಬೇಕು. ಗಂಡುಭೀರಿಯಂತಿರಬಾರದು. ಹೊರಗಿನ ತಿರುಗಾಟ ಕಡಿಮೆಯಾಗಬೇಕು. ತಂದೆ ತಾಯಿಗಳು ಹೇಳಿದ ಹಾಗೆ ಕೇಳಿಕೊಂಡಿರಬೇಕು.

ಕುಸುಮ ಒಬ್ಬ ಬುದ್ಧಿವಂತ ಹುಡುಗಿ. ಕುಸುಮ ಶಾಲೆಗೆ ಸೇರಿದ್ದೇ ತಡವಾಗಿ ಏಳನೆಯ ತರಗತಿ ಮುಗಿಯುವ ಹೊತ್ತಿಗೆ ಸಾಕಷ್ಟು ಬೆಳೆದಿದ್ದಳು ಕುಸುಮ. ಶಾಲೆಯ ಎಲ್ಲಾ ಕಾರ್ಯಕ್ರಮಗಳಲ್ಲೂ ಈಕೆಯದೇ ಮೇಲುಗೈ. ಏಳನೆಯ ತರಗತಿ ಮುಗಿಯುತ್ತಲೇ ಆಕೆಯ ತಂದೆ ಅವಳ ಮದುವೆ ಮಾಡಲು ಹುಡುಗನೊಬ್ಬನನ್ನು ನೋಡಿದ. ಕುಸುಮ ತಾನು ಮುಂದೆ ಓದಬೇಕು ಮದುವೆ ಬೇಡ ಎಂದು ಎಷ್ಟು ಹೇಳಿದರೂ ಅವಳ ತಂದೆ ಕೇಳಲಿಲ್ಲ. ಆತ ನೋಡಿದ ಹುಡುಗನೊಡನೆ ಆಕೆಯ ಮದುವೆ ನಡೆದು ಹೋಯಿತು. ಮದುವೆ ಆಯಿತೇನೋ ನಿಜ. ಆದರೆ ಕುಸುಮ ಮತ್ತು ಅವಳ ಗಂಡನಲ್ಲಿ ಹೊಂದಾಣಿಕೆಯೇ ಇಲ್ಲ. ಅವನು ಸಂಶಯದ ಪ್ರಾಣಿ. ಕುಸುಮ ಯಾರೊಡನೆ ಮಾತನಾಡಿದರೂ ಅನುಮಾನದಿಂದಲೇ ಕಾಣುತ್ತಾನೆ. ಒಮ್ಮೆ ಕುಸುಮ ತನ್ನ ಶಾಲೆಯಲ್ಲಿ ಓದಿದ ಹುಡುಗನನ್ನು ಮಾತನಾಡಿಸಿದಳು ಎನ್ನುವ ಕಾರಣದಿಂದಲೇ ಅವಳನ್ನು ದನ ಬಡಿದ ಹಾಗೆ ಬಡಿದು ಅವಮಾನಗೊಳಿಸಿದ. ಗಂಡ ಎಂದರೇ ಜಿಗುಪ್ಸೆ ಪಡುತ್ತಾಳೆ ಕುಸುಮ. ಒಟ್ಟಿನಲ್ಲಿ ಇಬ್ಬರಲ್ಲೂ ಹೊಂದಾಣಿಕೆಯೇ ಇಲ್ಲ. ತಾನು ಹೇಗಾದರೂ ಓದಿ ತನ್ನ ಕಾಲ ಮೇಲೆ ತಾನು ನಿಲ್ಲಬೇಕಾಗಿತ್ತು ಎಂದು ಇಂದಿಗೂ ಕೊರಗುತ್ತಾಳೆ ಕುಸುಮ. ಆರ್ಥಿಕವಾಗಿ ದುರ್ಬಲರಾದ ಅವರ ಸಂಸಾರದಲ್ಲಿ ಸ್ವತಂತ್ರವಾಗಿ ಯಾವ ನಿರ್ಧಾರ ತೆಗೆದುಕೊಳ್ಳುವುದೂ ಅಸಾಧ್ಯ. ಆದರೆ ಸಮಾಜ ಕುಸುಮ ಹೇಗಿದ್ದರೂ ಗಂಡನೊಡನೆ ಹೊಂದಿಕೊಳ್ಳಲೇಬೇಕು ಎನ್ನುತ್ತದೆ.

ನೀಲವೇಣಿ ಲಕ್ಷಣವಾದ ಹುಡುಗಿ. ತುಂಬಾ ಜಾಣೆ ಹಾಗೂ ತಿಳುವಳಿಕೆ ಇದ್ದವಳು. ಅವಳ ತಂದೆ

ಅವಳನ್ನು ಅನುರೂಪನಾದ ಹುಡುಗನಿಗೆ ಕೊಟ್ಟು ಮದುವೆ ಮಾಡಿದರು. ನೀಲವೇಣಿಯ ಜೀವನ ಸುಂದರ ವಾಗಿಯೇ ಇತ್ತು. ಒಂದು ಹೆಣ್ಣುಮಗುವೂ ಆಯಿತು. ಆದರೆ ಆಕಸ್ಮಿಕವಾಗಿ ನೀಲವೇಣಿಯ ಗಂಡ ಅಪಘಾತ ವೊಂದರಲ್ಲಿ ಸಾವನ್ನಪ್ಪಿದ. ನೀಲವೇಣಿಯ ಪರಿಸ್ಥಿತಿ ತೀರಾ ಶೋಚನೀಯವಾಯಿತು. ನೀಲವೇಣಿಯನ್ನು ಸಮಾಧಾನ ಪಡಿಸುವುದರ ಜೊತೆಗೆ ಅವಳ ಮೂರು ತಿಂಗಳ ಮಗುವನ್ನು ಸುಧಾರಿಸುವುದು ಅವಳ ತಂದೆ-ತಾಯಿಗಳಿಗೆ ಕಷ್ಟವಾಗುತ್ತಿತ್ತು. ನೀಲವೇಣಿ ಬರು ಬರುತ್ತಾ ತೀರಾ ಮಂಕಾಗತೊಡಗಿದಳು. ಅವಳ ಜೀವನ ದಲ್ಲಿ ಏನಾದರೂ ಬದಲಾವಣೆಯಾಗದಿದ್ದರೆ ನೀಲವೇಣಿ ಹುಚ್ಚಿಯಾಗುವುದು ಖಚಿತ ಎಂದು ಅರಿತ ಅವಳ ತಂದೆ-ತಾಯಿಗಳು S.S.L.C ಯಲ್ಲಿ ಫೇಲಾಗಿದ್ದ ಅವಳನ್ನು ಮತ್ತೆ ಓದಲು ಪ್ರೇರೇಪಿಸಿದರು. ಈಗ ಅವಳು ಅಂಗನವಾಡಿ ಟೀಚರ್. ತನ್ನ ನೋವನ್ನು ಮರೆಯಲು ಒಂದು ಉದ್ಯೋಗ ಅವಳಿಗೆ ದೊರೆತಿದೆ.

ಹಳ್ಳಿಯಲ್ಲಿ ಗಂಡ ಸತ್ತ ತಕ್ಷಣ ವಿಧವೆಯ ಪಟ್ಟ ಅವಳನ್ನು ಆವರಿಸುತ್ತದೆ. ಅವಳು ಹೇಗಿದ್ದರೂ ಜನ ಸೇರುವುದಿಲ್ಲ. ಅವಳು ನಕ್ಕರೂ ಸೇರುವುದಿಲ್ಲ. ಶುಭ ಕಾರ್ಯಕ್ರಮದಲ್ಲಿ ಅವರಿಗೆ ಪ್ರವೇಶ ಇರುವುದಿಲ್ಲ. ಒಂದು ಗಿಡ ಬೆಳೆಯಲು ಬೆಳಕೊಂದೆ ಸಾಲದು. ಗೊಬ್ಬರ, ನೀರು ಬೇಕು. ಹಾಗೆಯೇ ಮಹಿಳೆಗೆ ವಿದ್ಯೆ, ಧೈರ್ಯ, ಪ್ರೋತ್ಸಾಹ ದೊರೆತರೆ ಆಕೆ ಖಂಡಿತ ಮುಂದು ವರಿಯುತ್ತಾಳೆ. ಮಹಿಳೆಯೂ ಕೂಡ ಮಾನಸಿಕವಾಗಿ ಪ್ರಬುದ್ಧತೆಯನ್ನು ಬೆಳೆಸಿಕೊಳ್ಳಬೇಕು. ಹಳ್ಳಿಯಲ್ಲಿ ಮಹಿಳೆಯರು ತಮ್ಮ ಬಿಡುವಿನ ಸಮಯದಲ್ಲಿ ಪೇಪರ್ ಓದುವುದೋ ಅಥವಾ ಯಾವುದಾದರೂ ಕಸೂತಿ ಕೆಲಸ ದಲ್ಲೋ ತೊಡಗಿಕೊಳ್ಳಬಹುದು. ಆದರೆ ತಮ್ಮನ್ನು ತಾವು ಬೆಳೆಸಿಕೊಳ್ಳಬೇಕೆಂಬ ಮನೋಭಾವನೆ ಮಹಿಳೆಯರಲ್ಲಿ ಬಹಳ ಕಡಿಮೆ. ಅಕ್ಕಪಕ್ಕದವರ ಜೊತೆ ಹರಟುವುದರಲ್ಲೇ ಅವರ ಬಿಡುವಿನ ಸಮಯ ವ್ಯರ್ಥವಾಗಿ ಬಿಡುತ್ತದೆ. ಹಾಗಾಗಿ ಹಳ್ಳಿಗಳಲ್ಲಿನ ಪರಿಸರದ ಜೊತೆಗೆ ಆಕೆಯಲ್ಲೂ ತಾನು ತನ್ನ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳಬೇಕು ಎಂಬ ಮನೋಭಾವನೆಯು ಅಗತ್ಯ ತೀರಾ ಇದೆ. ●

---

# ನಾರ್‌ಪ್ಲಾಂಟ್ ಕುರಿತು

[ ತುಂಬಾ ವಿವಾದಕ್ಕೊಳಗಾಗಿರುವ ನಾರ್‌ಪ್ಲಾಂಟ್ ಎನ್ನುವ ಗರ್ಭ ನಿರೋಧಕದ ಬಗ್ಗೆ ಇಲ್ಲಿ ಸತ್ಯಾಂಶಗಳಿವೆ ]

**1. ನಾರ್‌ಪ್ಲಾಂಟ್ ಎಂದರೇನು ? :** ನಾರ್‌ಪ್ಲಾಂಟ್ ಎನ್ನುವುದು ದೀರ್ಘಕಾಲಿಕ ಪರಿಣಾಮವನ್ನು ಹೊಂದಿರುವ ಮಹಿಳೆಯರಿಗಾಗಿ ಇರುವ ಒಂದು ಹಾರ್ಮೋನಲ್ ಗರ್ಭನಿರೋಧಕ. ಲೆವೊನೋರ್‌ಗೆಸ್ಟೈಲ್ ಎನ್ನುವ ಕೃತಕವಾಗಿ ತಯಾರಿಸಲಾದ ಹಾರ್ಮೋನನ್ನು ತುಂಬಿಕೊಂಡ ರಬ್ಬರ್ ಟ್ಯೂಬುಗಳನ್ನು ಇದು ಹೊಂದಿರುತ್ತದೆ. ಈ ರಬ್ಬರ್ ಟ್ಯೂಬುಗಳು ದೇಹದಲ್ಲಿ ಒಡೆದುಕೊಂಡು ದೇಹ ರಚನೆಯೊಳಕ್ಕೆ ಕರಗಿಕೊಳ್ಳುವು ದಿಲ್ಲ. ಹಾಗೆಯೇ ಇರುತ್ತವೆ. ಮತ್ತು ಇವುಗಳ ಒಳಗೆ ಇರುವ ಹಾರ್ಮೋನು ಬಸಿರನ್ನು ಪಡೆಯುತ್ತದೆ. ಲೆವೊನೋರ್‌ಗೆಸ್ಟೈಲ್ ಹಾರ್ಮೋನನ್ನು ತುಂಬಿಕೊಂಡ ಟ್ಯೂಬುಗಳನ್ನು ಮಹಿಳೆಯರ ತೋಳಿನಲ್ಲಿ ಚರ್ಮದ ಕೆಳಗಡೆ ತೂರಿಸಿಡಲಾಗುತ್ತದೆ. ಪ್ರತಿದಿನ ಇದರಿಂದ ಒಂದು ಚೂರು ಹಾರ್ಮೋನು ರಕ್ತದೊಳಕ್ಕೆ ಒಸರಿ ಕೊಳ್ಳುತ್ತದೆ. ಇದಿಷ್ಟೇ ಸಾಕು ಬಸಿರನ್ನು ತಡೆಗಟ್ಟಲು. ಇವನ್ನು ಚರ್ಮದ ಕೆಳಗೆ ತೂರಿಸಿಡುವುದರಿಂದ ಇವನ್ನು Sub-dermal implants ಎಂದು ಕರೆಯಲಾಗುತ್ತದೆ, ನೋರ್‌ಗೆಸ್ಟೈಲ್ ಹಾರ್ಮೋನನ್ನು ಹೊಂದಿರುವ ಇವನ್ನು ನಾರ್‌ಪ್ಲಾಂಟ್ ಎನ್ನಲಾಗುತ್ತದೆ.

ಈಗ ಎರಡು ಬಗೆಯ ನಾರ್‌ಪ್ಲಾಂಟ್‌ಗಳ ಲಭ್ಯ ವಿವೆ. ನಾರ್‌ಪ್ಲಾಂಟ್ (R) ಅನ್ನು ನಾರ್‌ಪ್ಲಾಂಟ್ (6) ಎಂತಲೂ ಕರೆಯಲಾಗುತ್ತದೆ. ಇದಕ್ಕೆ ಸುಮ್ಮನೆ ನಾರ್‌ಪ್ಲಾಂಟ್ ಎಂದು ಹೇಳಬಹುದು. ಇನ್ನೊಂದು ನಾರ್‌ಪ್ಲಾಂಟ್ (2). ಇವೆರಡೂ ಲೆವೊನೋರ್‌ಗೆಸ್ಟೈಲ್ ಹಾರ್ಮೋನನ್ನೇ ಹೊಂದಿರುತ್ತವೆ. ನಾರ್‌ಪ್ಲಾಂಟ್ (R) ನಲ್ಲಿ 34 ಸೆಂ. ಮೀ. ಉದ್ದದ ಆರು ಟೊಳ್ಳಾದ ಟ್ಯೂಬುಗಳಿರುತ್ತವೆ ಮತ್ತು ನಾರ್‌ಪ್ಲಾಂಟ್ (2) ರಲ್ಲಿ 4.4. ಸೆಂ.ಮೀ. ಬಲವಾದ ಕಡ್ಡಿಗಳಿರುತ್ತವೆ.

**2. ತಯಾರಿಕೆ :** ಅಮೆರಿಕಾದ ಪಾಪುಲೇಷನ್ ಕೌನ್ಸಿಲ್ ನಾರ್‌ಪ್ಲಾಂಟ್ ವ್ಯವಸ್ಥೆಯನ್ನು ಬೆಳೆಸಿತು.

ಪ್ರಪಂಚದಾದ್ಯಂತ ಇದರ ಕ್ಲಿನಿಕಲ್ ಪ್ರಯೋಗಗಳನ್ನು, ಪಾಪುಲೇಶನ್ ಕೌನ್ಸಿಲ್‌ನ ಭಾಗವಾದ ಇಂಟರ್ ನ್ಯಾಷನಲ್ ಕಮಿಟಿ ಫಾರ್ ಕಾನ್‌ಟ್ರಸೆಪ್ಶನ್ ರಿಸರ್ಚ್ (ICCR) ವಹಿಸಿಕೊಂಡಿತು. ನಾರ್‌ಪ್ಲಾಂಟ್ (R) ಮತ್ತು ನಾರ್‌ಪ್ಲಾಂಟ್ (2) ಗಳು ಪ್ಯಾಪುಲೇಷನ್ ಕೌನ್ಸಿಲ್‌ನ ಟ್ರೇಡ್‌ಮಾರ್ಕ್‌ನಲ್ಲಿ ನೊಂದಣಿಗೊಂಡವು. ಆದರೆ ಫಿನ್‌ಲ್ಯಾಂಡಿನ Huhtamakiaoy Leirus ಪಾಪುಲೇಷನ್ ಕೌನ್ಸಿಲ್‌ನ ಪರವಾನಗಿಯಿಂದ ತಯಾರಿಸಿತು.

**3. ಚರ್ಮದ ಕೆಳಗಿಡುವ ಗರ್ಭನಿರೋಧಕಗಳು ಬೆಳೆದು ಬಂದದ್ದು :** ಭಾರತೀಯ ಮಹಿಳೆಯರ ಮೇಲೆ ಪ್ರಯೋಗಗೊಂಡಿರುವ ಚರ್ಮದ ಕೆಳಗಿಡುವ ಗರ್ಭನಿರೋಧಕ ನಾರ್‌ಪ್ಲಾಂಟ್ ಮಾತ್ರವಲ್ಲ. 1969ರಲ್ಲಿ ಇಂತಹ ಮೊದಲ ಗರ್ಭನಿರೋಧಕಗಳು ಪಾಪುಲೇಷನ್ ಕೌನ್ಸಿಲ್‌ನಿಂದ ಕ್ಲಿನಿಕಲ್ ಪರೀಕ್ಷೆಗೊಳಪಟ್ಟಿದ್ದವು. ಭಾರತವು ICCR ನ ಸದಸ್ಯ ದೇಶವಾಗಿ ಇಂತಹ ಪ್ರಯೋಗಗಳನ್ನು ತನ್ನಲ್ಲಿ ನಡೆಸಲು ಒಪ್ಪಿಕೊಂಡಿತು ಮೆಜೆಸ್ಟ್ರೋಲ್, 3 ಮತ್ತು 4 ನಾರೆಥಿನ್‌ಡ್ರೋನ್ ಹಾರ್ಮೋನುಗಳು ಇಲ್ಲಿ ಪರೀಕ್ಷೆಗೊಳಪಟ್ಟವು. 1975ರಲ್ಲಿ ಮೆಜೆಸ್ಟ್ರೋಲ್‌ಯುಕ್ತವಾದವುಗಳನ್ನು ಹಿಂತೆಗೆದುಕೊಳ್ಳಲಾಯಿತು ಅವು ನಾಯಿಗಳಲ್ಲಿ ಕ್ಯಾನ್ಸರ್ ತಂದದ್ದರಿಂದ. 1982ರ ವೇಳೆಗೆ, ICMR ನಾರ್‌ಪ್ಲಾಂಟ್ (R) ಮತ್ತು (2)ಗಳನ್ನು ಪರೀಕ್ಷೆಗೊಳಪಡಿಸಲು ತೀರ್ಮಾನಿಸಿತು. ಇದರ ಜತೆಗೆ ದೇಹದಲ್ಲಿ ಕರಗಿಕೊಳ್ಳುವ ಕಾಪ್ರೋನಾರ್ ಎಂಬ ಚರ್ಮದ ಕೆಳಗಿಡುವ ಗರ್ಭನಿರೋಧವನ್ನು ಭಾರತೀಯ ಮಹಿಳೆಯರ ಮೇಲೆ ಪ್ರಯೋಗಿಸಲು ಒಪ್ಪಿಗೆ ನೀಡಲಾಯಿತು.

**4. ಭಾರತದಲ್ಲಿ ನಾರ್‌ಪ್ಲಾಂಟ್‌ನ ಪ್ರಯೋಗಾತ್ಮಕ ಪರೀಕ್ಷೆ :** 1982ರಲ್ಲಿ ನಾರ್‌ಪ್ಲಾಂಟ್ (R) ನ ಅಡ್ಡ ಪರಿಣಾಮಗಳು, ಸಾಮರ್ಥ್ಯ ಇತ್ಯಾದಿಗಳನ್ನು ನಿರ್ಧರಿಸಲು ಎರಡನೇ ಅಧ್ಯಯನವನ್ನು ದೆಹಲಿಯ ಎರಡು ಕೇಂದ್ರಗಳಲ್ಲಿ ಕೈಗೊಳ್ಳಲಾಯಿತು.

1983-84ರಲ್ಲಿ ನಾರ್‌ಪ್ಲಾಂಟ್ (2)ರ ಸಂಬಂಧದ ಮೂರನೇ ಹಂತದ ಪರೀಕ್ಷೆಗಳನ್ನು ಪ್ರಾರಂಭಿಸಲಾಯಿತು. ಆರು ಕಡ್ಡಿಗಳಿರುವ ಸಾಧನಕ್ಕಿಂತ ಎರಡು ಕಡ್ಡಿಗಳಿರುವ ಸಾಧನ ಹೆಚ್ಚು ಸುಲಭಕಾರಿ ಎನಿಸಿದ ಹಿನ್ನಲೆಯಲ್ಲಿ ಇದು ಪ್ರಾರಂಭಗೊಂಡಿತು. 1983ರಲ್ಲಿ ಆಗಸ್ಟ್‌ನಿಂದ 1985ರ ಸೆಪ್ಟೆಂಬರ್ ವೇಳೆಗೆ 1569 ಮಹಿಳೆಯರು ಇಲ್ಲಿ ದಾಖಲುಗೊಂಡಿದ್ದರು.

1986ರಲ್ಲಿ ನಾಲ್ಕನೇ ಹಂತದ ಅಧ್ಯಯನ ಪ್ರಾರಂಭವಾಯಿತು. ರಾಷ್ಟ್ರೀಯ ಕುಟುಂಬ ಯೋಜನಾ ಕಾರ್ಯಕ್ರಮದಲ್ಲಿ ಇರುವ ಶಸ್ತ್ರಚಿಕಿತ್ಸೆ ಸನ್ನಿವೇಶಗಳಡಿ ನಾರ್‌ಪ್ಲಾಂಟ್ (2)ನ್ನು ಹೇಗೆ ಮಧ್ಯ ತೂರಿಸಬಹುದೆನ್ನುವುದನ್ನು ಕುರಿತಾದದ್ದು ಈ ಅಧ್ಯಯನ. 1989ರ ವೇಳೆಗೆ ಇಲ್ಲಿ 1925 ಮಹಿಳೆಯರು ಇದಕ್ಕೆ ಒಪ್ಪಿ ಹೆಸರು ದಾಖಲಿಸಿಕೊಂಡರು.

1982ರಲ್ಲಿ ನಾರಾಪ್ಲಾಂಟ್ (2)ರಲ್ಲಿ ಮುಂದುವರೆದ ಉಪಯೋಗವನ್ನು ನಿಲ್ಲಿಸಲಾಯಿತು. 1988-89ರಲ್ಲಿ 458 ಜನ ಮಹಿಳೆಯರು ಇದರ ಮುಂದುವರೆದ ಪ್ರಯೋಗಗಳಲ್ಲಿ ಪಾಲ್ಗೊಂಡಿದ್ದರು.

**5. ನಾರ್‌ಪ್ಲಾಂಟ್ ಹೇಗೆ ಕೆಲಸ ಮಾಡುತ್ತದೆ?** ನಾರ್‌ಪ್ಲಾಂಟ್ ಬಸಿರನ್ನು ಹೇಗೆ ತಡೆಗಟ್ಟುತ್ತದೆ ಎಂಬುದು ಸ್ಪಷ್ಟವಾಗಿ ತಿಳಿದಿಲ್ಲ. ಅದು ಈ ಕೆಳಕಂಡ ರೀತಿಯಲ್ಲಿ ಕೆಲಸ ಮಾಡುತ್ತದೆನ್ನಲಾಗುತ್ತದೆ.

* ಹೈಪೊಥೆಲಮಿಕ್-ಪಿಟ್ಯುಟರಿ-ಓವೇರಿಯನ್ ಕಾರ್ಯಾಚರಣೆಯಲ್ಲಿ ಕಸಿವಿಸಿಯನ್ನುಂಟುಮಾಡಿ ಗರ್ಭಕೂಡುವುದನ್ನು ತಡೆಯುತ್ತದೆ. ಕೊನೇ ಪಕ್ಷ 50 ಭಾಗ ಋತು ಚಕ್ರಗಳಲ್ಲಿ ನಾರ್‌ಪ್ಲಾಂಟ್ ಗರ್ಭ ಕೂಡುವುದನ್ನು ತಡೆಯುತ್ತದೆ. ಉಳಿದಂತೆ ಗರ್ಭಕೂಡುವ ಸಂಭವವಿರುತ್ತದ.
* ಗರ್ಭಕೋಶದ ಒಳಪೊರೆಯ ಬೆಳವಣಿಗೆಯಾಗುವುದನ್ನು ತಡೆಯುವ ಮೂಲಕ ಗರ್ಭಪಾತವಾಗುವಂತೆ ಮಾಡುತ್ತದೆ.
* ಗರ್ಭಕೊರಳಿನ ಸ್ರಾವವನ್ನು ಮಂದಗೊಳಿಸುವುದರ ಮೂಲಕ ಪುರುಷ ಜೀಜದ ಗರ್ಭಕೋಶ ಪ್ರವೇಶಿಸುವ ಸಾಧ್ಯತೆಗಳನ್ನು ಕ್ಷೀಣಗೊಳಿಸುತ್ತದೆ.
* ಗರ್ಭಾಶಯ ನಾಳ (Fallopian tube)ದ ಹಿಂಜುವಿಕೆಯನ್ನು ಕಡಿಮೆಗೊಳಿಸಿ ಅಂಡದ ಚಲನೆಯನ್ನು ನಿಧಾನಗೊಳಿಸುತ್ತದೆ.

ಹೀಗೆ ನಾರ್‌ಪ್ಲಾಂಟ್‌ನಲ್ಲಿರುವ ಲೆವೆನೋಜೆಸ್ಟ್ರಲ್ ಹಾರ್ಮೋನು ಪಿಟ್ಯೂಟರಿ, ಅಂಡಾಶಯ,ಗರ್ಭಾಶಯದ ಒಳಪೊರೆ, ಗರ್ಭಕೋಶಕೊರಳು ಮತ್ತು ಹೈಪೊಥೆಲಾಮಸ್‌ಗಳ ಮೇಲೆ ಪರಿಣಾಮ ತರುತ್ತದ. ಇದರಿಂದ

ಸಂಬಂಧಪಟ್ಟ ಅಂಗಗಳಲ್ಲಿ ತೀವ್ರ ಬದಲಾವಣೆಗಳಾಗುತ್ತವೆ.

**6. ಕ್ರಿಯೆಯ ಸಮಯಾವಧಿ :** ನಾರ್‌ಪ್ಲಾಂಟ್ (R) ಐದು ವರ್ಷಗಳೂ ಮತ್ತು ನಾರ್ ಪ್ಲಾಂಟ್ (2) ಮೂರು ವರ್ಷಗಳೂ ಪರಿಣಾಮ ಹೊಂದಿರುತ್ತವೆ.

**7. ನಾಟುವಿಕೆ :** ತೋಳು ಇಲ್ಲವೇ ಮುಂಗೈಯಲ್ಲಿ ನಾರ್‌ಪ್ಲಾಂಟನ್ನು ಅಳವಡಿಸಲಾಗುತ್ತದೆ. ಚರ್ಮವನ್ನು ಕೊಯ್ದು ನಾರ್‌ಪ್ಲಾಂಟ್‌ನ ಟ್ಯೂಬು ಇಲ್ಲವೇ ಕಡ್ಡಿಯನ್ನು ಅಲ್ಲಿ ತೂರಿಸಿ ಚರ್ಮದಡಿಯಲ್ಲಿ ಕೂರಿಸಲಾಗುತ್ತದೆ. ಗಾಯಾವನ್ನು ಬ್ಯಾಂಡೇಜ್‌ನಿಂದ ಮುಚ್ಚಲಾಗುತ್ತದೆ. ತುಂಬಾ ಕಡಿಮೆ ಸಮಯದಲ್ಲಿ ಇದನ್ನು ಅಳವಡಿಸಬಹುದು ಆದರೆ ತೆಗೆಯಲು ಹೆಚ್ಚು ಸಮಯ ಬೇಕು (ಅರ್ಧ ಗಂಟೆಗೂ ಹೆಚ್ಚು). ಏಕೆಂದರೆ ಕಾಲಾಂತರದಲ್ಲಿ ಇದರ ಸುತ್ತಲೂ ಮಾಂಸ ಬೆಳೆದು ಅವು ಒಳ ಹೊಕ್ಕು ಕೂರುತ್ತವೆ.

**8. ನಾರ್‌ಪ್ಲಾಂಟ್ ಉಪಯೋಗದಿಂದಾಗುವ ತೊಡಕುಗಳು :**

**(ಅ) ಮುಟ್ಟಿನಲ್ಲಿ ತೊಂದರೆ :** ನಾರ್‌ಪ್ಲಾಂಟ್‌ನಿಂದ ನಾರ್ಮಲ್ ಆದ ಋತುಚಕ್ರ ಏರುಪೇರುಗೊಳ್ಳುತ್ತದೆ. ರಕ್ತ ಸ್ರಾವದ ದಿನಗಳು ಹೆಚ್ಚಾಗುತ್ತವೆ, ಮುಟ್ಟುಗಳ ನಡುವೆ ರಕ್ತಸ್ರಾವವಾಗುತ್ತದೆ, ಬೇಗ ಬೇಗ ಮುಟ್ಟು ಬರುತ್ತದೆ, ಲಯದಲ್ಲಿ ಏರುಪೇರಾಗುತ್ತದೆ, ಅತಿ ಹೆಚ್ಚು ಸ್ರಾವವಾಗುತ್ತದೆ, ಇಲ್ಲವೇ ಮುಟ್ಟೇ ಆಗದಂತಾಗುತ್ತದೆ.
ICMR ನಮೂರನೇ ಹಂತದ ಅಧ್ಯಯನದಲ್ಲಿ ಅರವತ್ತಕ್ಕೂ ಹೆಚ್ಚು ಮಹಿಳೆಯರು ಇಂತಹ ತೊಂದರೆಗಳಿಗೊಳಗಾಗಿದ್ದು ಕಂಡು ಬಂದಿದೆ.

**(ಆ) ಇತರ ಹಾರ್ಮೋನಲ್ ತೊಂದರೆಗಳು :** ನಾರ್‌ಪ್ಲಾಂಟ್ ಪರಿಣಾಮ ತರುವ ಹೈಪೋಥೆಲಾಮಸ್, ಪಿಟ್ಯುಟರಿ ಮುಂತಾದ ಅಂಗಗಳು ಸಂತಾನೋತ್ಪತ್ತಿ ಚಕ್ರದ ಜತೆಗೆ ದೇಹದ ಇನ್ನೂ ಅನೇಕ ಕ್ರಿಯೆಗಳನ್ನೂ ನಿಯಂತ್ರಿಸುತ್ತವೆ. ಹೀಗಾಗಿ ಈ ಕ್ರಿಯೆಗಳ ಮೇಲೂ ಪರಿಣಾಮ ಉಂಟಾಗುತ್ತದೆ. ಹೀಗಾಗಿ ಮೈಗ್ರೇನ್, ಅಲ್ಲದೆ ಆತಂಕ, ಭ್ರಮೆ, ಖಿನ್ನತೆ ಮುಂತಾದ ಮನಸ್ಥಿತಿಯಲ್ಲಿನ ಬದಲಾವಣೆಗಳು, ವಾಕರಿಕೆ, ತಲೆ ಸುತ್ತುವುದು ಮೈ ನೋವು ಮುಂತಾದ ತೊಂದರೆಗಳು ಕಾಣಿಸಿಕೊಳ್ಳುತ್ತವೆ.

ಹತ್ತು ಕೆ. ಜಿಯವರೆಗೂ ದೇಹ ತೂಕದಲ್ಲಿ ಬದಲಾವಣೆಯಾಗಬಹುದು. ಕೆಲ ಹೆಂಗಸರಲ್ಲಿ (15./.) ವಿಪರೀತ ಮೊಡವೆ, ಮೈಮೇಲೆ ಕೂದಲು ಬೆಳೆಯುವುದು ಕಂಡು ಬಂದಿದೆ ಹಾರ್ಮೋನು ತೊಂದರೆಗೊಳಗಾಗಿದ್ದರಿಂದ. ಕೆಲ ಹೆಂಗಸರಲ್ಲಿ ಸ್ತನದಲ್ಲಿ ಹಾಲಿನಂತ ದ್ರವ ಸ್ರವಿಸುವುದು ಕಂಡು ಬಂದಿದೆ.

**(ಇ) ರಕ್ತ ಚಲನೆ ಮತ್ತು ಹೃದಯ ಸಂಬಂಧೀ ಸಮಸ್ಯೆಗಳು :** ನಾರ್‌ಪ್ಲಾಂಟ್‌ನಿಂದ ರಕ್ತ ಒತ್ತಡದಲ್ಲಿ ಹೆಚ್ಚಳ, ಹೃದಯ ಬಡಿತದಲ್ಲಿ ಹೆಚ್ಚಳ ಮಯೋಕಾರ್ಡಿಟಿಸ್ ಮತ್ತು ವೆರಿಕೋಸ್ ವೈನ್‌ಗಳು ಉಂಟಾಗುತ್ತವೆ. ರಕ್ತ ಹೆಪ್ಪುಗಟ್ಟುವ ಕ್ರಿಯೆಗೆ ಇದು ತೊಂದರೆಯುಂಟು ಮಾಡಿ ಅದರ ಸಂಬಂಧೀ ಸಮಸ್ಯೆಗಳಿಗೆ ಎಡೆ ಮಾಡುತ್ತದೆ (thrombophlebitis, deep vein thrombosis ಮತ್ತು Myocardial infraction)

**(ಈ)** ಮೈಕೆರೆತ, ಉರಿಯೂತ, ಚರ್ಮರೋಗ ಮತ್ತು ಮೂರ್ಛೆ.

**(ಉ) ಸಂತಾನೋತ್ಪತ್ತಿ ಅಂಗಗಳ ಮೇಲೆ ಪರಿಣಾಮ :** ಇದನ್ನು ಬಳಸಿದ 10./. ಹೆಂಗಸರಲ್ಲಿ ಅಂಡಾಶಯದಲ್ಲಿ ಕೋಶಗಳು (CYST) ಬೆಳೆದಿರುವುದು ಕಂಡು ಬಂದಿದೆ. ಇದರ ಜತೆಗೆ ಕಿಬ್ಬೊಟ್ಟೆಯಲ್ಲಿ ವಿಪರೀತ ನೋವು. ಈ ಕೋಶಗಳು ತಂತಾನೇ ಮಾಯವಾಗುತ್ತವೆಂದು ಹೇಳಲಾಗಿದ್ದರೂ ಕೆಲವರಲ್ಲಿ ಇದನ್ನು ಶಸ್ತ್ರ ಚಿಕಿತ್ಸೆ ಮುಖಾಂತರ ತೆಗೆಯಬೇಕಾಗಿ ಬಂದಿದೆ.

**(ಊ) ಟ್ಯೂಬುಗಳು/ಕಡ್ಡಿಗಳ ನಾಟುವಿಕೆಯ ತೊಂದರೆಗಳು :** ನಾಟುವಾಗ ಮತ್ತು ತೆಗೆಯುವಾಗ ಸೋಂಕುಂಟಾಗುವುದು, ಈ ಟ್ಯೂಬುಗಳು ಅಳವಡಿಸಿದ ಜಾಗದಿಂದ ಒಳಕ್ಕೆ ಹೂತುಕೊಳ್ಳುವುದು ಇವು ಕೆಲ ತೊಂದರೆಗಳು. ಒಳಕ್ಕೆ ಹೂತುಕೊಳ್ಳುವುದರಿಂದ ತೆಗೆಯುವಾಗ ಕಡ್ಡಿಗಳು ಒಡೆಯುವುದು, ಸುತ್ತಲೂ ಮಾಂಸ ಬೆಳೆದುಕೊಳ್ಳುವುದು ಮುಂತಾದ ತೊಂದರೆಗಳನ್ನು ತೆಗೆಯುವಾಗ ಎದುರಿಸಬೇಕಾಗುತ್ತದೆ.

**9. ನಾರ್ ಪ್ಲಾಂಟ್ ಬಳಕೆಯಿಂದ ದೀರ್ಘ ಕಾಲಿಕ ಪರಿಣಾಮಗಳು**

1. ನಾರ್‌ಪ್ಲಾಂಟ್ ಅನ್ನು 20 ವರ್ಷಗಳಿಗೂ ಹೆಚ್ಚು ಕಾಲ ಪರೀಕ್ಷಿಸಲಾಗಿದೆಯೆಂದು ಹೇಳಲಾಗಿದ್ದರೂ ಇದರ ದೀರ್ಘಕಾಲಿಕ ಪರಿಣಾಮಗಳನ್ನು ಕುರಿತು

ಹೇಳುವ ಅಧ್ಯಯನಗಳಿಲ್ಲ. ಮೇಲೆ ಹೇಳಿದ ತೊಂದರೆಗಳು ಶಾಶ್ವತವೋ ಅಲ್ಲವೋ ಎಂದು ಹೇಳುವ ದಾಖಲೆಗಳೂ ಇಲ್ಲ. ಅಂತಹ ಮಾಹಿತಿಗಳು ಸಿಗುವವರೆಗೂ ಇಂತಹ ತೊಂದರೆಗಳನ್ನು ಶಾಶ್ವತವಾದುವೆಂದೇ ಪರಿಗಣಿಸಬೇಕಾಗುತ್ತದೆ.

**2. ಗರ್ಭಕೋಶ ಕೊರಳಿನ ಕ್ಯಾನ್ಸರ್** : ನಾರ್‌ಪ್ಲಾಂಟ್ ಬಳಕೆಗೂ ಗರ್ಭಕೋಶ ಕೊರಳಿನ ಕ್ಯಾನ್ಸರಿಗೂ ಸಂಬಂಧವಿರುವುದು ಕಂಡು ಬಂದಿದೆ. ICMR ಅಧ್ಯಯನದಲ್ಲಿ ಕೂಡ, ನಾರ್‌ಪ್ಲಾಂಟ್‌ನ ಎರಡು ವರ್ಷಗಳ ಬಳಕೆಯಲ್ಲಿ,907 ಜನ ಹೆಂಗಸರಲ್ಲಿ 5 ಜನರಿಗೆ ಗರ್ಭಕೋಶ ಕೊರಳಿನಲ್ಲಿ ಕ್ಯಾನ್ಸರ್ ಸೂಚನೆಗಳು ಕಂಡು ಬಂದಿವೆ. ಇದಕ್ಕೂ ನಾರ್‌ಪ್ಲಾಂಟ್‌ಗೂ ಸಂಬಂಧವಿರುವುದು ಇದರಿಂದ ಸಂಪೂರ್ಣ ಖಚಿತವಾಗದೇ ಹೋದರೂ, ನಾರ್‌ಪ್ಲಾಂಟ್ ಸಂಬಂಧೀ ಅಧ್ಯಯನಗಳಲ್ಲಿ ಎಲ್ಲೂ ಇದರ ಬಗ್ಗೆ ಚಕಾರವನ್ನೇ ಎತ್ತದಿರುವುದು ಖೇದಕರ

3. ಲೆವೆನೋರ್‌ಗೆಸ್ಟ್ರೆಲ್‌ನ ದೀರ್ಘಕಾಲಿಕ ಬಳಕೆಯಿಂದ ಗರ್ಭಕೋಶದ ಒಳಪದರು ಸಂಪೂರ್ಣ ನಶಿಸಿ ಹೋಗುತ್ತದೆ. ಇದರರ್ಥ, ನಾರ್‌ಪ್ಲಾಂಟನ್ನು ಬಹುಕಾಲ ಬಳಸುವ ಹೆಂಗಸರಲ್ಲಿ ಇದರ ಸಂಬಂಧೀ ಕ್ಯಾನ್ಸರ್ ಬರುವ ಬಹುಪಾಲು ಸಾಧ್ಯತೆಗಳಿವೆ. ಅದೇನೇಯಿದ್ದರೂ ಇದಕ್ಕೆ ಸಂಬಂಧಿಸಿದ ಯಾವ ಅಧ್ಯಯನವೂ ನಡೆದಿಲ್ಲ.

**10. ಹುಟ್ಟುವ ಮಕ್ಕಳ ಮೇಲೆ ಪರಿಣಾಮ**

1 ಲೆವೊನೋರ್‌ಗೆಸ್ಟ್ರಲ್ ಭ್ರೂಣಕ್ಕೆ ಅಪಾಯಕಾರಿ

2 ಇತರ ಪ್ರೊಜೆಸ್ಟಿನ್‌ಗಳಂತೆ,ಲೆವೊನೋರ್‌ಗೆಸ್ಟ್ರಲ್ ಕೂಡ ಹೆಣ್ಣು ಸಂತಾನಗಳಲ್ಲಿ ಗಂಡು ಲಕ್ಷಣಗಳನ್ನು ಉಂಟುಮಾಡುತ್ತದೆ (ಇಲಿಗಳಲ್ಲಿ ಕಂಡುಬಂದಿರುವಂತೆ, ಹೆಣ್ಣು ಮರಿಗಳಿಗೆ ಗಂಡು ಮರ್ಮಾಂಗಗಳಿರುವುದು)

3 ನಾರ್‌ಪ್ಲಾಂಟ್‌ನಲ್ಲಿನ ಲೆವೆನೋರ್‌ಗೆಸ್ಟ್ರಲ್ ಹಾಲುಣಿಸುವ ತಾಯಿಯ ಸ್ತನಗಳಿಗೆ ರವಾನೆಯಾಗಿ, ಹಾಲೂಡುವ ಮಗುವಿನ ಕರುಳಿನಲ್ಲಿ ಸೇರಿಕೊಳ್ಳುತ್ತದೆ. ಇದರಿಂದ ಮಕ್ಕಳ ದೇಹ ತೂಕದಲ್ಲಿ ತೀವ್ರ ಏರಿಳಿತಗಳುಂಟಾಗಿ, ಸಾಮಾನ್ಯ ಕ್ರಿಯೆಗಳು ತೊಂದರೆಗೊಳಗಾಗುತ್ತವೆ.

**11. ಫಲಶಕ್ತಿಯ ಮರುಪಡೆಯುವಿಕೆ**

ನಾರ್‌ಪ್ಲಾಂಟ್ ಬಳಸುವವರು ಫಲಶಕ್ತಿ ಹಿಂದಿರುಗಿ ಪಡೆಯುವುದನ್ನು ಕುರಿತ ಯಾವುದೇ ಸೂಕ್ತ ಅಧ್ಯಯನಗಳು ನಡೆದಿಲ್ಲ.

**12 ನಾರ್‌ಪ್ಲಾಂಟ್ ಅನ್ನು ಎಂತಹವರು ಬಳಸಕೂಡದು :**

1) ಗರ್ಭಧರಿಸಿರುವ ಅನುಮಾನವಿರುವ ಮಹಿಳೆಯರು

2) ಹಾಲುಡಿಸುವ ತಾಯಂದಿರು ಹಾಲುಡಿಸುತ್ತಿರುವವರೆಗೂ

3) ಯಾವುದೇ ಪತ್ತೆ ಹಚ್ಚಲ್ಪಟ್ಟಿರದ ಮಾಮೂಲಿಯಲ್ಲದ ಯೋನಿಸ್ರಾವವಿರುವವರು

4) ಸರಿಯಾದ ಋತುಚಕ್ರ ಹೊಂದಿರದ ಹೆಂಗಸರು.

5) ಕರುಳು ಸಂಬಂಧಿ ಕಾಯಿಲೆಗಳಿರುವವರು.

6) ಹೃದಯ ಸಂಬಂಧೀ ಕಾಯಿಲೆಗಳಿರುವವರು.

7) ಸ್ತನ, ಗರ್ಭಕೋಶ ಇಲ್ಲವೇ ಗರ್ಭಕೋಶ ಕೊರಳಿನ ಕ್ಯಾನ್ಸರ್ ಇರುವವರು.

8) ಕಳೆದ ಬಸಿರಿನಲ್ಲಿ ಕಾಮಾಲೆ ಇಲ್ಲವೇ ಕೆರತ ಇದ್ದವರು.

9) ರಕ್ತ ಹೀನತೆ ಇರುವವರು.

10) ಕ್ಷಯಕ್ಕೆ Rifampicin ಔಷಧಿಯನ್ನಾಗಲಿ ಇಲ್ಲವೇ Barbitiurates ಎನ್ನುವ Antie- pileptic ಔಷಧಿಯನ್ನಾಗಲೀ ಇಲ್ಲವೇ phenylbutazoneಯನ್ನಾಗಲಿಕೆ ತೆಗೆದುಕೊಳ್ಳುತ್ತಿರುವ ಹೆಂಗಸರು.

**13. ನಾರ್‌ಪ್ಲಾಂಟ್‌ನ್ನು ಅಳವಡಿಸುವ ಮುನ್ನ ಮಾಡಬೇಕಾದ ಪರೀಕ್ಷೆಗಳು**

1) ಯಾವುದೇ Contra-indicationsಗಳಿಲ್ಲ ಎಂದು ಸಾಬೀತು ಪಡಿಸಿಕೊಳ್ಳಬೇಕು.

2) ದೇಹತೂಕ, ರಕ್ತಒತ್ತಡ, ನಾಡಿ ಪರೀಕ್ಷೆ.

3) ಸ್ತನ ಪರೀಕ್ಷೆಯೂ ಸೇರಿದಂತೆ ಸಾಮಾನ್ಯವಾದ ಪರೀಕ್ಷೆಗಳು.

4) ಗರ್ಭಕೋಶಕೊರಳಿನ ಕ್ಯಾನ್ಸರ್ ಪರೀಕ್ಷೆಯನ್ನೂ ಸೇರಿದಂತೆ ಎಲ್ಲ ಗೈನೊಕಾಲಜಿಕಲ್ ಪರೀಕ್ಷೆಗಳು.

5) ಗರ್ಭಿಣಿಯಾಗಿಲ್ಲರುವುದನ್ನು ಖಚಿತಪಡಿಸಿಕೊಳ್ಳುವ ಪರೀಕ್ಷೆ.

6) ರಕ್ತಪರೀಕ್ಷೆ (ಹೇಮೋಗ್ಲೋಬಿನ್, ಸ್ಮಿಯರ್, ಮೂತ್ರ ಪರೀಕ್ಷೆ ಮತ್ತು ಕರುಳು ಪರೀಕ್ಷೆ)

**14.** ಈ ಕೆಳಗಿನ ಯಾವುದೇ ತೊಂದರೆಗಳು ಕಾಣಿಸಿಕೊಂಡ ತಕ್ಷಣ ನಾರ್‌ಪ್ಲಾಂಟ್ ಅನ್ನು ಹೊರತೆಗೆಯಬೇಕು.

1) ದೃಷ್ಟಿಯಲ್ಲಿ ತೀವ್ರ ತೊಂದರೆ

2) Throm-phlecbitis ಅಥವಾ enbohsm ನ ಚಿನ್ಹೆಗಳು ಕಾಣಿಸಿಕೊಂಡಾಗ

3) ಕರುಳು ಬೇನೆಯ ಚಿನ್ಹೆಗಳು 4) ಅತಿ ರಕ್ತ ಒತ್ತಡ

5) ಗರ್ಭಕೋಶ ಕೊರಳಿನಲ್ಲಿ ಕಾನ್ಸರ್ ಸೂಚನೆ

6) ಮಾಮೂಲಿಯಲ್ಲದ ಋತುಸ್ರಾವದ ಜತೆ ಕಿಬ್ಬೊಟ್ಟೆಯ ನೋವು.

ಕೃಪೆ : Medico Friend circle balleetin

REGD NO. KRNA 271

## ಮಾನಸ

ಮಹಿಳೆಯರ ಮೇಲೆ ನಡೆಯುವ ಅಮಾನವೀಯ ದೌರ್ಜನ್ಯ ಹಿಂಸೆಗಳನ್ನು ಬೆಳಕಿಗೆ ತರುವುದಕ್ಕಾಗಿ.

ಶೋಷಿತ ವ್ಯವಸ್ಥೆಯನ್ನು, ಅದರ ವಿವಿಧ ರೂಪಗಳನ್ನು ಗುರುತಿಸುವುದಕ್ಕಾಗಿ

ಮಹಿಳೆಯರೊಂದಿಗೆ ಆತ್ಮೀಯ ಅರ್ಥಪೂರ್ಣ ಸಂವಾದಕ್ಕಾಗಿ

ಮಹಿಳಾ ಆಂದೋಲನದ ಹೊಸ ದಿಕ್ಕುಗಳ ಹುಡುಕಾಟಕ್ಕಾಗಿ






BOOK-POST

MANJULA
-, 3rd Cross
Markham Road
Ashok Nagar
BANGALORE- 560 025.

ವಿಳಾಸ :
" ಮಾನಸ "
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು-560 067